ದಲಿತರ ಬಂಡಾಯದ ಕೂಗು

ಸಂಪುಟ : 3 ನವೆಂಬರ್ 1978
ಸಂಚಿಕೆ : 3 ಬೆಲೆ : 20 ಪೈಸೆಗಳು

# ಪಂಚಮ

## ಕೆ. ಆರ್. ನಗರದ ಬಳಿ ದಲಿತ ಯುವಕನ ಅಮಾನುಷ ಕೊಲೆ

[ಪಂಚಮ ಪ್ರತಿನಿಧಿಯಿಂದ]

ದಲಿತೋದ್ಧಾರ, ದಲಿತರ ರಕ್ಷಣೆ ಬಗ್ಗೆ ರಾಜಕಾರಣಿಗಳ ಭಾಷಣಗಳು ಸತತ ಸಾಗುತ್ತಿರುವಾಗ, ಅವರ ನೆರಳಿನಲ್ಲೇ ದಲಿತರ ಕೊಲೆ ಸುಲಿಗೆಗಳು ಮಾಮೂಲಿನಂತೇ ನಡೆಯುತ್ತಿವೆ.

ಇದೇ ತಿಂಗಳ ಕಳೆದ 8ನೇ ತಾರೀಖಿನಂದು ಕೆ.ಆರ್. ನಗರದ ಬಳಿಯ ಹೊಸಹಳ್ಳಿಯಲ್ಲಿ ಹರಿಜನ ಲಕ್ಷ್ಮಯ್ಯ ಎಂಬುವರನ್ನು ಅದೇ ಊರಿನ ಒಕ್ಕಲಿಗರು ಕೊಲೆ ಮಾಡಿರುವ ಘಟನೆ ತಿಳಿದು ಬಂದಿದೆ.

ಈ ಕೊಲೆಗೆ ಹಿನ್ನೆಲೆ ಪ್ರೇಮ ಪ್ರಕರಣವೆಂದು ವದಂತಿಯಾಗಿದ್ದು, ಕೊಲೆಯಾಗಿರುವ ಲಕ್ಷ್ಮಯ್ಯ ಸಿದ್ದೇಗೌಡರ ಮಗಳಾದ ಮಾದೇವಿಯನ್ನು ಪ್ರೇಮಿಸುತ್ತಿದ್ದ. ಇದು ಒಕ್ಕಲಿಗರಿಗೆ ತಮ್ಮ ಅಂತಸ್ತಿಗೆ ಕಳಂಕವಾದಂತಾಗಿ ಹರಿಜನನಾದ ಲಕ್ಷ್ಮಯ್ಯ ತಮ್ಮ ಹುಡುಗಿಯನ್ನು ಪ್ರೇಮಿಸಿರುವುದನ್ನು ಸಹಿಸದಾದರು. ಮತ್ತು ಆ ಹುಡುಗಿಯ ಮದುವೆಯನ್ನು ಬೇರೊಬ್ಬನ ಜೊತೆ ತರಾತುರಿಯಿಂದ ಮುಗಿಸಿದರು. ಆದರೆ ಹುಡುಗಿಯ ಅಣ್ಣ ತಮ್ಮಂದಿರಲ್ಲಿ ಲಕ್ಷ್ಮಯ್ಯನ ಮೇಲಿದ್ದ ದ್ವೇಷ ನಿಧಾನವಾಗಿ ಬೆಳೆಯತೊಡಗಿದ್ದು, ಅನೇಕ ಸಲ ಲಕ್ಷ್ಮಯ್ಯನನ್ನು ಕೆಣಕಿ ಜಗಳ ತೆಗೆದಿದ್ದರಲ್ಲದೆ, ಅವನನ್ನು ಮುಗಿಸಬೇಕೆಂದು ಹೊಂಚು ಹಾಕುತ್ತಿದ್ದುದಾಗಿ ತಿಳಿದು ಬಂದಿದೆ.

ತಾ॥ 8-11-78ರಂದು ರಾತ್ರಿ ಲಕ್ಷ್ಮಯ್ಯ ತನ್ನ ಸಂಗಡಿಗರೊಂದಿಗೆ ಆರು ಮೈಲಿದೂರವಿರುವ ಕೆ.ಆರ್. ನಗರಕ್ಕೆ ಹೋಗಿ ಸಿನಿಮಾ ನೋಡಿ ಊರಿಗೆ ಹಿಂತಿರುಗುತ್ತಿದ್ದಾಗ–ಇದನ್ನು ಹೇಗೋ ತಿಳಿದುಕೊಂಡಿದ್ದ–ಮಾದೇವಿಯ ಅಣ್ಣಂದಿರಾದ ವೆಂಕಟೇಶ, ಪಾಪಣ್ಣ, ಚಿನ್ನಣ್ಣ, ರಾಮಚಂದ್ರೇ

[2ನೇ ಪುಟ ನೋಡಿ]

## ಧಾರವಾಡದ ಅಂಬೇಡ್ಕರ್ ಹಾಸ್ಟೆಲಿನಲ್ಲಿ ಅನ್ನವಹಾರ

ಧಾರವಾಡದಲ್ಲಿ ಇತ್ತೀಚೆಗೆ ದಲಿತ ಸಂಘರ್ಷ ಸಮಿತಿ ಅಲ್ಲಿನ ಅಂಬೇಡ್ಕರ್ ಹಾಸ್ಟೆಲಿನ ವಿದ್ಯಾರ್ಥಿಗಳಿಗೆ ಆಗುತ್ತಿದ್ದ ಅನ್ಯಾಯ ಪ್ರತಿಭಟಿಸಿ ತೀವ್ರ ಸ್ವರೂಪದ ಹೋರಾಟ ನಡೆಸಿತು. ಹಾಸ್ಟೆಲನ್ನು "ಡಾ॥ ಬಿ. ಆರ್. ಅಂಬೇಡ್ಕರ್ ಎಜುಕೇಶನಲ್ ಆ್ಯಂಡ್ ಚಾರಿಟೇಬಲ್ ಟ್ರಸ್ಟ್" ನಡೆಸುತ್ತಿತ್ತು. ಇಲ್ಲಿನ ಆಡಳಿತ ವರ್ಗ ಮಾಡುತ್ತಿದ್ದ ರಶೀತಿ ಇಲ್ಲದೇ ಹಣದ ವಸೂಲಿ, ಕೆಳದರ್ಜೆಯ ಊಟ, ನ್ಯಾಯಬದ್ಧವಾಗಿ ಕೊಡಬೇಕಾದ ಇನ್ನಿತರೇ ಸೌಲಭ್ಯಗಳನ್ನು ಕೊಡದೇ ಇರುವುದು– ಇವುಗಳೆಲ್ಲವುದರ ಆಧಾರದ ಮೇಲೆ ದಲಿತ ಸಂಘರ್ಷ ಸಮಿತಿ ಅಂದಾಜಿನ ಪ್ರಕಾರ ಪ್ರತಿವರ್ಷ 60 ಸಾವಿರ ರೂ.ಗಳಿಗಿಂತಲೂ ಹೆಚ್ಚು ಹಣವನ್ನು ಎತ್ತಿ ಹಾಕಲಾಗುತ್ತಿತ್ತು. ಹಾಸ್ಟೆಲಿನ ಆಡಳಿತವು ಇಷ್ಟು ದುರಾಡಳಿತಕ್ಕೊಳಗಾಗಲು ಮುಖ್ಯ ಕಾರಣ ಹಾಸ್ಟೆಲಿನ ಚೇರ್ಮನ್ನರಾಗಿರುವ ಕಂದಾಯ ಮಂತ್ರಿ ಬಿ. ಬಸವಲಿಂಗಪ್ಪನವರು.

ಅಕ್ಟೋಬರ್ 12ರಂದು ಬಸವಲಿಂಗಪ್ಪನವರು ಧಾರವಾಡಕ್ಕೆ ಬಂದಾಗ ಹಾಸ್ಟೆಲ್ ವಿದ್ಯಾರ್ಥಿಗಳು ಮತ್ತು ಸಂಘರ್ಷ ಸಮಿತಿಯ ಕಾರ್ಯಕರ್ತರು "ಹಾಸ್ಟೆಲ್‌ನಲ್ಲಿ ಸರಿಯಾದ ವ್ಯವಸ್ಥೆ" ಮಾಡಿರಿ ಎಂದು ಕೇಳಿದರು. ಆದರೆ ಅದಕ್ಕೆ ಸಿಕ್ಕ ಪ್ರತಿಫಲ–ಬಿ. ಬಸವಲಿಂಗಪ್ಪನವರು ಅಧಿಕಾರದ ಅಮಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಪೂರ್ಣ ಮುನ್ಸೂಚನೆ ಕೊಡದೇ ಅಕ್ಟೋಬರ 13ರಿಂದ ದಿಢೀರ್ ಅಂತ ಹಾಸ್ಟೆಲಿನಲ್ಲಿ ಊಟ ಬಂದು ಮಾಡಿದರು. ಬಸವಲಿಂಗಪ್ಪರು ವೇದಿಕೆ ಮೇಲೆ ದಲಿತ ಹಿತೈಸಿ ಬದುಕಿನಲ್ಲಿ ದಲಿತರ ಆಂತರಿಕ ಶತ್ರು ಎಂಬುದು ಇದರಿಂದ ಸಿದ್ಧವಾಯಿತು. ತಮಗೆ ನ್ಯಾಯ ಸಿಗಬೇಕಾದರೆ ಹೋರಾಟವೇ ದಾರಿ ಎಂದು ಅರಿತುಕೊಂಡವರೇ ಅಕ್ಟೋಬರ್ 13 ರಂದು ೬೦ ಜನ ವಿದ್ಯಾರ್ಥಿಗಳು ಕೈಯಲ್ಲಿ ಖಾಲಿತಟ್ಟೆ, ಪುಸ್ತಕ ಹಿಡಿದು ಸಮಾಜ ಕಲ್ಯಾಣ ಅಧಿಕಾರಿಗಳ ಕಚೇರಿ ಎದುರು ಧರಣಿ ಕುಂತರು. ಬಸವಲಿಂಗಪ್ಪನವರು ದಲಿತ ವಿದ್ಯಾರ್ಥಿಗಳನ್ನು ಬೀದಿಗೆ ತಳ್ಳಿದರೂ ಧಾರವಾಡದ ಜನತೆ ಅವರ ಕೈ ಬಿಡಲಿಲ್ಲ. ಸಂಘರ್ಷ ಸಮಿತಿ ವಿನಂತಿ ಮಾಡಿಕೊಂಡಿದ್ದಕ್ಕಾಗಿ ಹೋಟೆಲು ಮಾಲೀಕರು ಊಟ ಕೊಟ್ಟರು. ಸಗಣಿ ಮಾರಿ ಬದುಕುವ ಲಕ್ಷ್ಮವ್ವಾ

[ಕೊನೆಯ ಪುಟನೋಡಿ]

## ದಲಿತರ ಒಗ್ಗಟ್ಟು ಒಡೆಯಲು ಸವರ್ಣೀಯರ ಕುತಂತ್ರ
## ಕೋಲಾರದ ಹತ್ತಿರ ಅಗ್ರಹಾರದಲ್ಲಿ ದಲಿತರೊಳಗೇ ಘರ್ಷಣೆ

[ನಮ್ಮ ಪ್ರತಿನಿಧಿಯಿಂದ]

ಅಮಾನವೀಯವಾಗಿ ತುಳಿಯಲ್ಪಟ್ಟ ದಲಿತರು ಎಚ್ಚರಗೊಂಡು ಒಟ್ಟಾಗುವುದನ್ನು ಸಹಿಸದ ಸವರ್ಣೀಯ ಭೂಮಾಲೀಕ ವರ್ಗ, ಅವರ ಮೌಢ್ಯವನ್ನು ಬಳಸಿಕೊಂಡು ಆ ಸಮುದಾಯದಲ್ಲೇ ಒಡಕುಂಟು ಮಾಡುವ ಕೆಲಸ ಮಾಡುತ್ತಿದೆ. ಇಂಥ ಭೂ ಮಾಲೀಕರ ಕುತಂತ್ರದಿಂದ ಎರಡು ಗುಂಪಾಗಿ ಒಡೆದ ದಲಿತರಲ್ಲೇ ಘರ್ಷಣೆಯಾಗಿ ಸಾವು ಸಂಭವಿಸಿರುವ ಘಟನೆ ತಾ॥ 19-11-78 ರಂದು ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಅಗ್ರಹಾರದಲ್ಲಿ ನಡೆದಿದೆ.

ಅಗ್ರಹಾರದ ವಿದ್ಯಾವಂತ ದಲಿತರು ಊರಿನ ದೇವಸ್ಥಾನಕ್ಕೆ ತಮಗೆ ಪ್ರವೇಶ ಇಲ್ಲದಿರುವ ಬಗ್ಗೆ ಒಂದು ತಿಂಗಳ ಹಿಂದೆ ಪೋಲೀಸಿಗೆ ದೂರು ಕೊಟ್ಟರು. ಸ್ಥಳ ಪರೀಕ್ಷೆಗೆ ಬಂದ ಪೋಲೀಸ್ ಕಾವಲಲ್ಲಿ ದೇವಸ್ಥಾನ ಪ್ರವೇಶ ಮಾಡಿದರು. ಇದು ಸವರ್ಣೀಯ ಭೂಮಾಲೀಕ ವರ್ಗಕ್ಕೆ ಸಹಿಸಲಿಲ್ಲ. ಪರಿಣಾಮ ತಮ್ಮ ಮನೆಗಳಲ್ಲೇ ಕೂಲಿ ಮತ್ತು ಜೀತಕ್ಕಿರುವ ದಲಿತರನ್ನು ಬಳಸಿಕೊಂಡು ಅವರಲ್ಲೇ ಒಡಕುಂಟು ಮಾಡುವ ಕೆಲಸ ಮಾಡಿತಲ್ಲದೆ, ವಿದ್ಯಾವಂತರ 5 ಕುಟುಂಬ

[ಕೊನೆಯ ಪುಟನೋಡಿ]

# ದಲಿತರ ಹೆಣಗಳ ಮೇಲೂ ದೌರ್ಜನ್ಯ

ಇಂಡಿಯಾ ದೇಶದಲ್ಲಿ ಬಂಡವಾಳಶಾಹಿಗಳು ಮತ್ತು ಜಮೀನ್ದಾರರು ಬದುಕಿರುವ ದಲಿತರನ್ನು ಕಿತ್ತು ತಿನ್ನುತ್ತಿದ್ದಾರೆ. ದಲಿತರು ಸಾಯುವವರೆಗೂ ಈ ಕೆಲಸ ನಿರಂತರವಾಗಿ ನಡೆಯುತ್ತದೆ. ದಲಿತರು ಸತ್ತ ಮೇಲೆ ಇದಕ್ಕೆ ಕೊನೆ ಎಂದು ಕೆಲವರು ಭಾವಿಸಬಹುದು. ಆದರೆ ಬೆಂಗಳೂರು ಜಿಲ್ಲೆ ರಾಮನಗರ ತಾಲ್ಲೂಕಿನ ಹಾಗಲಹಳ್ಳಿಯಲ್ಲಿ ನಡೆಯುತ್ತಿರುವ ಘಟನೆಯಿಂದ ಈ ಮಾತು ಸುಳ್ಳಾಗಿದೆ. ಏಕೆಂದರೆ ಸತ್ತ ಹೆಣಗಳ ಮೇಲೂ ಅಲ್ಲಿ ದಬ್ಬಾಳಿಕೆ ನಡೆಯುತ್ತಿದೆ. ಹಾಗಲಹಳ್ಳಿಯ ದಲಿತರಿಗೆ ಸತ್ತವರನ್ನು ಹೂಳಲು ಸ್ಮಶಾನವಿಲ್ಲ. ಆದ್ದರಿಂದ ಹೆಣಗಳನ್ನು ಕಾಡಿನ ಕೊರಕಲುಗಳಲ್ಲಿ ಇಡುತ್ತಾರೆ. ಹೆಣ ಕೊಳೆತಾಗ ಕಾಗೆ, ಹದ್ದು, ನರಿ, ನಾಯಿಗಳು ಮಾಂಸವನ್ನು ಕಿತ್ತು ತಿನ್ನುವುದಷ್ಟೇ ಅಲ್ಲ ಒಮ್ಮೊಮ್ಮೆ ಅವುಗಳನ್ನು ಊರಿನ ಕಡೆಗೆ ಎಳೆದುಕೊಂಡು ಬಂದು ಎಸೆಯುತ್ತವೆ. ಈ ಧಾರುಣ ದೃಶ್ಯವನ್ನು ಹೆಣದ ಸಂಬಂಧಿಗಳು ನೋಡಬೇಕಾಗಿದೆ. ಈ ಇಂಡಿಯಾ ದೇಶದಲ್ಲಿ ದಲಿತರ ಹೆಣಗಳನ್ನು ಕಂಡರೂ ದ್ವೇಷವೇ ?

ಹಾಗಲಹಳ್ಳಿಯ ದಲಿತರು ಹಿಂದಿನಿಂದಲೂ ಅರ್ಕಾವತಿ ನದಿಯ ಪಕ್ಕದಲ್ಲಿದ್ದ ಸ್ಮಶಾನದಲ್ಲಿ ಹೆಣ ಹೂಳುತ್ತಿದ್ದರು. 1974ರಲ್ಲಿ ಊರ ಗೌಡರು ಈ ಸ್ಮಶಾನದ ಜಮೀನು ತಮ್ಮದೆಂದೂ, ಇಲ್ಲಿ ಹೆಣ ಹೂಳಬಾರದೆಂದೂ ತಡೆದರು ಸ್ಮಶಾನವಿಲ್ಲದೆ ಕಂಗಾಲಾದ ದಲಿತರು ಪೋಲೀಸರಿಗೆ ದೂರು ಕೊಟ್ಟರು. ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಅಷ್ಟೇ ಅಲ್ಲ ಪ್ರಭಾವಿ ಗೌಡರೇ ತಮ್ಮ ಜಮೀನಿನಲ್ಲಿ ಹೆಣ ಹೂಳಬಾರದೆಂದು ಸ್ಟೇ ಆರ್ಡರ್ ತಂದರು.

ಸರ್ಕಾರಕ್ಕೆ ಈ ಬಗ್ಗೆ ದೂರು ಕೊಟ್ಟಿದ್ದರೂ ಪ್ರಯೋಜನವಾಗಿಲ್ಲ. ಅಲ್ಪ ಸ್ವಲ್ಪ ಸ್ವಂತ ಜಮೀನಿದ್ದವರು ಹೆಣಗಳನ್ನು ತಮ್ಮತಮ್ಮ ಜಮೀನಿನಲ್ಲೇ ಹೂಳುತ್ತಿದ್ದಾರೆ. ಜಮೀನಿಲ್ಲದವರು ಎಲ್ಲಿ ಹೂಳಬೇಕು ? ಹೊಳೆಗೆ ಎಸೆಯಬೇಕೇ ? ಇಲ್ಲಾ ಕಾಡಿನ ಕೊರಕಲಿನಲ್ಲಿ ಹೆಣ ಇಡುವುದನ್ನು ಮುಂದುವರಿಸಬೇಕೆ ?

ಸರ್ಕಾರ ಈ ಕೂಡಲೇ ಕ್ರಮ ತೆಗೆದುಕೊಂಡು ಹಿಂದಿನಿಂದಲೂ ಇದ್ದ ಸ್ಮಶಾನವನ್ನು ದಲಿತರಿಗೆ ಬಿಡಿಸಿಕೊಟ್ಟು 'ದಲಿತರ ಹೆಣಗಳ ಮೇಲೂ ದೌರ್ಜನ್ಯ' ನಡೆಯುತ್ತಿರುವುದನ್ನು ತಪ್ಪಿಸಬೇಕೆಂದು ಪಂಚಮ ಒತ್ತಾಯಿಸುತ್ತದೆ.

## ದಲಿತ ನುಡಿ

ಲಕ್ಷ ಎಕರೆಗಳ ಭೂಮಿಯನ್ನು ಒಂದು ಬಟ್ಟಲು ನೀರಿನಿಂದ ಕೃಷಿ ಮಾಡುವುದು ಎಷ್ಟು ಹಾಸ್ಯಾಸ್ಪದ ಅಸಾಧ್ಯವೋ ಅಂತೆಯೇ ಇದುವರೆಗೂ ಹರಿಜನರ ಅಭಿವೃದ್ಧಿಗಾಗಿ ನಡೆಸಿರುವುದು. ಇದು ಕೇವಲ ಕಣ್ಣೀರನ್ನು ಒರೆಸುವ ಕೆಲಸ. ಇದರಲ್ಲಿ ಸತ್ಯಾಂಶ ಇಲ್ಲ. ಪೀಡಿತರಾಗಿರುವವರು ಎಷ್ಟು ಕಾಲ ಕಣ್ಣು, ಬಾಯಿ–ಮುಚ್ಚಿಕೊಂಡು ನರಳುತ್ತಿರುತ್ತಾರೋ ಅಲ್ಲಿಯವರೆಗೂ ಅವರಿಗೆ ನ್ಯಾಯ ದೂರಕುವುದೇ ಇಲ್ಲ.

**—ಬೋಯಿ ಭೀಮಣ್ಣ**

## ......ಅಮಾನುಷ ಕೊಲೆ

[ಒಂದನೇ ಪುಟದಿಂದ]

ಗೌಡ ಮತ್ತು ಸ್ವಾಮೀಗೌಡ ಮತ್ತಿತರರು ದಾರಿಯಲ್ಲಿ ಕಾಯ್ದುಕೊಂಡಿದ್ದು ಮೇಲೆ ಬಿದ್ದು ಕೊಲೆ ಮಾಡಿದ್ದಾರೆಂದು ಗೊತ್ತಾಗಿದೆ.

ಮಾರನೇ ದಿನ ಬೆಳಿಗ್ಗೆ ಊರಿಂದ 1 ಫರ್ಲಾಂಗ್ ದೂರದಲ್ಲಿ ಹೆಣ ಬಿದಿದ್ದು, ತಲೆ ಮತ್ತು ಟೆಸ್ಟಿಕಲ್‌ಗಳಿಗೆ ಏಟು ಬಿದ್ದಿದೆಯಲ್ಲದೆ ಕಿಡ್ನಿ ಒಡೆದು ಹೋಗಿರುವುದು ತಿಳಿದು ಬಂದಿದೆ ಕೊಲೆಗಾರರು ತಲೆ ತಪ್ಪಿಸಿಕೊಂಡಿದ್ದಾರೆ.

ಕೊಲೆ ನಡೆದ ಐದು ದಿನಗಳ ಹಿಂದೆ ಅಂದರೆ ತಾ॥ 3–11–78 ರಂದು ಕೆ. ಆರ್. ನಗರದಲ್ಲಿ ತಾ॥ ದಲಿತ ಸಂಘರ್ಷ ಸಮಿತಿ ಶಾಖೆ ತೆರೆದಿದ್ದು, ಸಮಿತಿಯ ಖಜಾಂಚಿಯಾಗಿ ಕೊಲೆಯಾಗಿರುವ ಲಕ್ಷ್ಮಯ್ಯ ಆಯ್ಕೆಯಾಗಿದ್ದರು.

## ಪ್ರತಿಕ್ರಿಯೆ

### ಪತ್ರಕರ್ತರ ದಡ್ಡತನ

ಮಾನ್ಯರೇ,

ಕಳೆದ ಅಕ್ಟೋಬರ್ 78ರ ಪಂಚಮದಲ್ಲಿಯ ಹತ್ತೂ ಸುತ್ತಿನಿಂದ ಕಾಲಂನಲ್ಲಿ ಪ್ರಕಟವಾಗಿರುವ "ಗಾಂಧಿ ಹುಟ್ಟಿದ ಈ ನಾಡಿನಲ್ಲಿ ಹರಿಜನ ಹೆಂಗಸೊಬ್ಬಳು ನೀರು ಮುಟ್ಟಿದಳೆಂಬ ಕಾರಣಕ್ಕಾಗಿ ಸವರ್ಣೀಯ ಪಂಚಾಯಿತಿದಾರರು ಚಾವಡಿಯಲ್ಲಿ ಆಕೆಯನ್ನು ಅವಮಾನಕರವಾಗಿ ಥಳಿಸುವಂತದನ್ನು ನಾವು ಈಗ ಊಹಿಸಿಕೊಳ್ಳಲೂ ಸಾಧ್ಯವಿಲ್ಲ." ಎಂಬ ಮಾತನ್ನು 'ಒಂದು ಊರಿನ ಕತೆ' ಚಲನ ಚಿತ್ರದಲ್ಲಿಯ ಒಂದು ಸನ್ನಿವೇಶದ ಬಗ್ಗೆ ಹೇಳಿರುವ ದೊಡ್ಡ ಪತ್ರಿಕೆಯ ಸಂಪಾದಕರಾಗಿರುವ ಖಾದ್ರಿ ಶಾಮಣ್ಣನವರ ದಡ್ಡತನಕ್ಕೆ ಆಶ್ಚರ್ಯವಾಯಿತು.

ದಿನನಿತ್ಯವೂ ದಲಿತರ ಮೇಲೆ ಇಂಥ ಅಮಾನುಷ ಘಟನೆಗಳು ನಡೆಯುತ್ತಿವೆ. ಉದಾ : ಮಧ್ಯ ಪ್ರದೇಶದ ಗೋಪಾಲಪುರ ಎಂಬಲ್ಲಿ ಸೆ. 16 ರಂದು ಹರಿಜನ ಮಹಿಳೆಯೊಬ್ಬಳು ಹಳ್ಳಿಯ ಬಾವಿಯಲ್ಲಿ ನೀರು ಸೇದಲು ಹೋಗಿದ್ದಕ್ಕೆ ಆಕೆಯನ್ನು ಬೆತ್ತಲೆಗೊಳಿಸಿ ಥಳಿಸಿದ ಪ್ರಕರಣ ನಡೆದಿದೆ.

ಗುಲ್ಬರ್ಗ ಜಿಲ್ಲೆಯ ಹೊನಗೇರಿ-ಎಂಬಲ್ಲಿ ಜೂನ್ 20ರಂದು 8 ತಿಂಗಳ ಗರ್ಭಿಣಿಯಾಗಿದ್ದ ಹರಿಜನ ಮಾರುತಮ್ಮ ಎಂಬಾಕೆ ನೀರು ತರಲು ಹೋಗುತ್ತಿದ್ದಾಗ ಆಕೆಯ ಸೆರಗು ತಾಗಿದ್ದಕ್ಕೆ ಸವರ್ಣೀಯರು ಊರಿನ ಮಧ್ಯದಲ್ಲೇ ಆಕೆಯ ಗಂಡ ಮತ್ತು ಅತ್ತೆಯ ಎದುರೇ ಬೆತ್ತಲೆಗೊಳಿಸಿ ಮೂರ್ಛೆ ಹೋಗುವವರೆಗೂ ಥಳಿಸಿದ್ದಾರೆ.

ಗಾಂಧೀವಾದಿ, ಸಮಾಜವಾದಿ, ಮತ್ತು ಪ್ರಜಾಪ್ರಭುತ್ವದ ನಾಲ್ಕನೆಯ ಆಸ್ತಿ ಎನಿಸಿಕೊಳ್ಳುವ ಪತ್ರಿಕಾರಂಗದ ಪತ್ರಕರ್ತರಿಗೆ ತಮ್ಮ ಗಾಂಧೀ ನಾಡಿನಲ್ಲಿಯೇ ನಡೆಯುವ ಇಂಥ ಘಟನೆಗಳ ಪರಿವೆಯೇ ಇಲ್ಲದಿರುವುದು ಈ ದೇಶದ ದುರಂತ.

**—ಬಸವರಾಜ,** ಮೈಸೂರು

## ಆಡಳಿತ ಮಂಡಳಿಯಿಂದ ಶಾಲಾ ಶಿಕ್ಷಕರಿಗೆ ಕಿರುಕುಳ

ಪೌರ ಕಾರ್ಮಿಕರೇ ಹೆಚ್ಚು ವಾಸಿಸುತ್ತಿರುವ ಬೆಂಗಳೂರು ನಗರದ ವಿನೋಬ ಕಾಲೋನಿಯಲ್ಲಿ 'ಸಿಟಿ ಹರಿಜನ ಸೇವಕ ಸಂಘ ಪ್ರಾಥಮಿಕ ಶಾಲೆ' ಇದೆ. ಈ ಶಾಲೆ 1956ರಲ್ಲಿ ಪ್ರಾರಂಭವಾದಾಗ ಇದ್ದ ಬೆಂಚು, ಕುರ್ಚಿ, ಟೇಬಲ್ಲುಗಳು ಈಗಲೂ ಅಷ್ಟೇ ಇವೆ. ಆಗ ಇದ್ದ 2ಬೆಂಚುಗಳು ಮುರಿದು ಈಗ ಅವೂ ಮಣೆಗಳಾಗಿ ಮಾರ್ಪಟ್ಟಿವೆ. ಕಾರ್ಪೋರೇಷನ್‌ನಿಂದ ಉಚಿತವಾಗಿ ಪಡೆದಿರುವ ಈ ಶಾಲೆ ಕಟ್ಟಡ ಸುಮಾರು ವರ್ಷಗಳಿಂದ ಸುಣ್ಣ ಕಂಡಿಲ್ಲ. ಬಿರುಕು ಬಿಟ್ಟಿರುವ ಗೋಡೆಗಳು, ಮಳೆ ಬಂದರೆ ಸೋರಿ ಹರಿಯುವ ನೀರು; ಇಂಥ ದಿನಗಳಲ್ಲಿ ತರಗತಿ ನಡೆಸುವುದಕ್ಕೇ ಸಾಧ್ಯವಿಲ್ಲದ ಸ್ಥಿತಿ.

ಈ ಶಾಲೆ ಇಷ್ಟೊಂದು ದುಸ್ಥಿತಿಯಲ್ಲಿರುವುದಕ್ಕೆ ಇಲ್ಲಿನ ಆಡಳಿತ ಮಂಡಳಿಯೇ ಕಾರಣವಾಗಿದೆ. ಆಡಳಿತ ಮಂಡಳಿಯ ಅಧ್ಯಕ್ಷರಾಗಿರುವ ಎಂ. ಎಲ್. ಎ., ಐ. ಪಿ. ಡಿ. ಸಾಲಪ್ಪನವರು ಮತ್ತು ಆಡಳಿತ ಮಂಡಳಿಯ ನಿರ್ಲಕ್ಷ್ಯದಿಂದ ಈ ಶಾಲೆಯಲ್ಲಿ ಕೆಲಸ ಮಾಡುತ್ತಿರುವ ಇಬ್ಬರು ಉಪಾಧ್ಯಾಯರು ತಮಗಾಗುತ್ತಿರುವ ತೊಂದರೆ ಮತ್ತು ಕಿರುಕುಳವನ್ನು ಹೇಳಿಕೊಂಡಿದ್ದಾರೆ.

ಶಾಲೆಯ ಆಡಳಿತ ಮಂಡಳಿಯ ಅಧ್ಯಕ್ಷರು ಮೂರು ನಾಲ್ಕು ವರ್ಷಗಳಿಂದಲೂ ಶಾಲೆಯ ಮನ್ನಣೆ ಪತ್ರಗಳನ್ನು ಸರ್ಕಾರಕ್ಕೆ ಕೊಟ್ಟಿಲ್ಲದಿರುವುದು ತಿಳಿದು ಬಂದಿದ್ದು, ನಾಲ್ಕು ವರ್ಷಗಳಿಂದಲೂ ಶಿಕ್ಷಕರಿಗೆ ಇನ್‌ಕ್ರಿಮೆಂಟ್ ಸಹ ಮಾಡಿಸಿಕೊಟ್ಟಿಲ್ಲ. ಈ ಬಗ್ಗೆ ಶಾಲಾ ಶಿಕ್ಷಕರು ಕಾಲೋನಿಯ ನಿವಾಸಿಗಳು ಮತ್ತು ಬೆಟರ್‌ಮೆಂಟ್ ಕಮಿಟಿಯ ಸದಸ್ಯರ ಜೊತೆಯಲ್ಲಿ ತಾ|| 12-9-78ರಂದು ಅಧ್ಯಕ್ಷರನ್ನು ಭೇಟಿಯಾದಾಗ ಅವರು "ನಿಮ್ಮನ್ಯಾರು ಶಾಲೆಗೆ ಹೋಗಿ ಎಂದು ತಿಳಿಸಿದರು" ಎಂದು ಬೈದದ್ದಲ್ಲದೆ, ಕಮಿಟಿಯವರಿಗೆ "ಇನ್ನು ಮೇಲೆ ಈ ಶಿಕ್ಷಕರ ವಿಷಯವಾಗಿ ಬರಬೇಡಿ" ಎಂದೂ "ಇವರ ಬದಲು ಬೇರೆ ಶಿಕ್ಷಕರನ್ನು ಕಳಿಸುತ್ತೇನೆಂದೂ" ಗದರಿಸಿ ಕಳುಹಿಸಿದ್ದಾರೆಂದು ತಿಳಿದು ಬಂದಿದೆ.

ಹತ್ತು ವರ್ಷಗಳಿಂದಲೂ ಇದೇ ಶಾಲೆಯಲ್ಲಿ ಶಿಕ್ಷಕರಾಗಿರುವ ಇವರು ಅಧ್ಯಕ್ಷರ ಈ ರೀತಿಯ ವರ್ತನೆಯಿಂದ ತೊಂದರೆಗೊಳಗಾಗಿದ್ದಾರೆ. ಆಡಳಿತ ಮಂಡಳಿ ಶಾಲಾ ಮನ್ನಣೆ ಪತ್ರಗಳನ್ನು ಸರ್ಕಾರಕ್ಕೆ ಕಳುಹಿಸದಿದ್ದ ಕಾರಣ, ಮತ್ತು ಶಿಕ್ಷಣ ಇಲಾಖೆಯು ಶಾಲಾ ಆಡಳಿತ ಮಂಡಳಿಗೆ 1500 ರೂ. ಸ್ಟೆಬಿಲಿಟಿ ಫಂಡನ್ನು ಸರ್ಕಾರಕ್ಕೆ ಕಟ್ಟಲು ಸೂಚನೆ ನೀಡಿದ್ದರೂ ಅವರು ಅದನ್ನು ತಿರಸ್ಕರಿಸಿದ ಕಾರಣದಿಂದ ಕಳೆದ ವರ್ಷ ಶಿಕ್ಷಕರಿಗೆ ಮೂರು ತಿಂಗಳ ಸಂಬಳ ನಿಲ್ಲಿಸಲಾಗಿತ್ತು. ಇದರಿಂದ ಶಿಕ್ಷಕರೇ ಶಿಕ್ಷಣ ಇಲಾಖೆ ಅಧಿಕಾರಿಗಳ ಅನುಮತಿ ಪಡೆದು ತಾವೇ 500ರೂ. ಸ್ಟೆಬಿಲಿಟಿ ಫಂಡ್ ಕಟ್ಟಲಾಗಿ ನಿಲ್ಲಿಸಿದ ಮೂರು ತಿಂಗಳ ವೇತನ ಮಂಜೂರಾಯಿತೆಂದು ತಿಳಿದು ಬಂದಿದೆ. ಆಡಳಿತ ಮಂಡಳಿಯು ಶಾಲಾ ಮೇಂಟನನ್ಸ್ ಗ್ರಾಂಟ್ ಪ್ರಪೋಸಲ್ಸ್‌ಗಳನ್ನು ಐದಾರು ವರ್ಷಗಳಿಂದಲೂ ಸರ್ಕಾರಕ್ಕೆ ಕಳಿಸಿಲ್ಲ. ಇದರಿಂದಾಗಿ ಶಾಲೆಯ ಖರ್ಚು ವೆಚ್ಚಗಳೆಲ್ಲ ಬಡ ಶಿಕ್ಷಕರ ಮೇಲೇ ಬೀಳುತ್ತಿವೆ. ಆಡಳಿತ ಮಂಡಳಿಯ ಇಂಥ ಬೇಜವಾಬ್ದಾರಿ ಹಾಗೂ ಉದಾಸೀನತೆಯ ಕಾರಣಗಳಿಂದ ಕಳೆದ ಆಗಸ್ಟ್ ತಿಂಗಳೂ ಶಿಕ್ಷಕರಿಗೆ ವೇತನ ತಡೆ ಹಿಡಿದಿದ್ದು, ಶಿಕ್ಷಣಾಧಿಕಾರಿಗಳಿಗೆ ಮುಚ್ಚಳಿಕೆ ಬರೆದುಕೊಟ್ಟು ವೇತನ ಮಂಜೂರು ಮಾಡಿಸಿಕೊಂಡಿದ್ದಾರೆಂದು ತಿಳಿದು ಬಂದಿದ್ದು ಕೂಡಲೇ ಸರ್ಕಾರ ಈ ಬಗ್ಗೆ ಕ್ರಮ ತೆಗೆದುಕೊಂಡು ಬಡ ಶಿಕ್ಷಕರಿಗೆ ಆಗುತ್ತಿರುವ ತೊಂದರೆಗಳನ್ನು ನಿವಾರಿಸಬೇಕೆಂದು ಪಂಚಮ ಒತ್ತಾಯಿಸುತ್ತದೆ.

## 'ಹಾಲ್'ನಲ್ಲಿ ಕೆಲಸದ ಬಗ್ಗೆ ಅಸ್ಪೃಶ್ಯತೆ

ಬಹುತೇಕ ಬ್ರಾಹ್ಮಣರೇ ತುಂಬಿರುವ ಬೆಂಗಳೂರಿನ ಹಿಂದೂಸ್ತಾನ್ ಏರೋನಾಟಿಕ್ ಲಿಮಿಟೆಡ್‌ನ ಆಸ್ಪತ್ರೆಯಲ್ಲಿ ಹರಿಜನನೊಬ್ಬ ಈಗ ತನ್ನ ಕೆಲಸದಿಂದ ವಂಚಿತನಾಗಿ, ಅರ್ಹತೆ–ಅನುಭವಗಳಿದ್ದಾಗ್ಯೂ ಕೆಲಸಕ್ಕೆ ಅಸ್ಪೃಶ್ಯನಾಗಿ ಆಡಳಿತ ಸಿಬ್ಬಂದಿಯವರಿಂದ ಅಮಾನವೀಯವಾಗಿ ತಿರಸ್ಕರಿಸಲ್ಪಟ್ಟಿರುವುದು ತಿಳಿದುಬಂದಿದೆ.

ಮುನಿವೆಂಕಟಪ್ಪ, ಆ ಆಸ್ಪತ್ರೆಯಲ್ಲಿ 68 ರಿಂದ 73ರವರೆಗೆ ವಾರ್ಡ್‌ಬಾಯ್ ಆಗಿ, 73ರಿಂದ ಎಕ್ಸರೇ ವಿಭಾಗದ ಕತ್ತಲು ಕೋಣೆ ಸಹಾಯಕನಾಗಿ ನೇಮಕವಾದ. ಅನಂತರ, 1976ರಲ್ಲಿ ಎಕ್ಸರೇ ವಿಭಾಗದ ಮೇಲ್ವಿಚಾರಕರ ನಿವೃತ್ತಿನಂತರ ಮುನಿವೆಂಕಟಪ್ಪನವರೇ ಎಕ್ಸರೇ ಘಟಕದಲ್ಲಿ ರೋಗಿಗಳ ಛಾಯಾಚಿತ್ರ ತೆಗೆಯುತ್ತಿದ್ದ. ಕೆಲಸವನ್ನು ತುಂಬ ಶ್ರದ್ಧೆಯಿಂದ, ಸೇವಾಭಾವದಿಂದ ಹೊತ್ತು ಗೊತ್ತಿಲ್ಲದೆ ನಿರ್ವಹಿಸಿದ್ದಕ್ಕೆ ಮುಖ್ಯ ವೈದ್ಯಕೀಯ ಮೇಲ್ವಿಚಾರಣಾಧಿಕಾರಿಗಳು 'ನಿನ್ನನ್ನು ಎ ಗ್ರೇಡ್‌ಗೆ ಬಡ್ತಿಕೊಡುತ್ತೇವೆ' ಎಂದು ಶ್ಲಾಘಿಸಿದರು, ಮೆಚ್ಚಿಕೊಂಡರು.

ಆದರೆ ಬಡ್ತಿ ನೇಮಕ ಪ್ರಶ್ನೆಬಂದಾಗ ನಿನ್ನ S.S.L.C ಪಾಸುಮಾಡು ಎಂದರು. ಈ ನಿಯಮ ಕಟ್ಟುನಿಟ್ಟಾಗಿ ಪಾಲಿಸಿದ ಉದಾಹರಣೆ ಇಲ್ಲಿ ಇಲ್ಲ. ಆದರೆ ಬೇರೊಬ್ಬ ಬ್ರಾಹ್ಮಣ ಸಮುದಾಯಕ್ಕೆ ಸೇರಿದವನನ್ನು ಸೇರಿಸಿಕೊಂಡರು. ಇದು ಕಣ್ಣೆದುರೇ ಮಾಡಿದ ದೊಡ್ಡ ದ್ರೋಹ.

ಯಾರೂ ಇಲ್ಲದಾಗ 2ತಿಂಗಳವರೆಗೆ ಮುನಿವೆಂಕಟಪ್ಪರಿಂದ ದುಡಿಸಿಕೊಂಡು ಬಡ್ತಿ ವಿಷಯ ಬಂದಾಗ ತಿರಸ್ಕರಿಸಿ ; ಬೇರೆ ವ್ಯಕ್ತಿಯನ್ನು ಆಯ್ದುಕೊಂಡದ್ದು ಸ್ವಜನ ಪಕ್ಷಪಾತ. ಆದಿ

[ಆರನೇ ಪುಟನೋಡಿ]

### ಬಂಡಾಯ

ಮೆತ್ತಿಕ್ಕಿದ ಮಣ್ಣಿನಲ್ಲಿ
ಮುತ್ತಿಕ್ಕಿದ ನನ್ನವರು
ಹಗಲೆನ್ನದೆ ಇರುಳೆನ್ನದೆ
ದೇಹವನ್ನ ದಂಡಿಸಿದರು
ಒಡೆಯರ ದರಬಾರಿನಲ್ಲಿ
ಬಿತ್ತಿ ಬೆಳೆದ ಕಾಳುಗಳನು
ಅವರ ಕಣಜದಲ್ಲಿ ತುಂಬಿ
ಕೈಯೊಡ್ಡಿ ನಿಂತವರು
ಒಡೆಯರ ಕೆಂಗಣ್ಣಿನಲ್ಲಿ
ಪಾತಾಳಕೆ ಇಳಿದವರು
ಆಕಾಶಕೆ ಕಣ್ಣನೆಟ್ಟು
ಮೃಷ್ಟಾನ್ನವ ಕಂಡರು
ಮುತ್ತಿಟ್ಟ ಕಾಲುಗಳನು
ಕೈಗಳಿಂದು ಹಿಡಿದವರು
ದೌರ್ಜನ್ಯದ ಅರ್ಭಟದಲಿ
ಸಿಡಿದೆದ್ದು ನಿಂತರು.

—ಗೋಪಾಲಕೃಷ್ಣ

# ಹರಿಜನರ ಮೇಲಿನ ಕೊಲೆ ಸುಲಿಗೆ ಇತ್ಯಾದಿ -- ಒಂದು ಸಮೀಕ್ಷೆ

ಹರಿಜನ ಗಿರಿಜನರ ಹುಟ್ಟು ಮತ್ತು ಆರ್ಥಿಕ ದುರ್ಬಲತೆ ಕಾರಣಗಳಿಗಾಗಿ ಇಡೀ ದೇಶದ ಉದ್ದಗಲಕ್ಕೂ ದಿನನಿತ್ಯ ಎಡಬಿಡದೆ ನಡೆಯುತ್ತಿರುವ ಕೊಲೆ-ಸುಲಿಗೆ, ದೌರ್ಜನ್ಯ, ಹಲ್ಲೆ, ಅತ್ಯಾಚಾರಗಳ ಬಗ್ಗೆ 'ಅಪರಾಧ ವರದಿ' ಆಧಾರದ ಮೇಲೆ ಕೇಂದ್ರ ಸರ್ಕಾರ ಇತ್ತೀಚೆಗೆ ನಡೆಸಿದ ಅಧ್ಯಯನದ (1974 ರಿಂದ 1977ರ ಜೂನ್ ವರೆಗೆ) ಅಂಕಿ ಅಂಶಗಳು.

ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ನಡೆದ ದೌರ್ಜನ್ಯಗಳು. ಉತ್ತರಪ್ರದೇಶ 806-74, 329-75, 591-76, ಮಧ್ಯ ಪ್ರದೇಶ 59-74, 76-75, 323-76, ಆಂಧ್ರಪ್ರದೇಶ 44-74, 15-75, 48-76, ಗುಜರಾತ್ 2-74, ಕರ್ನಾಟಕ 6-74, 22-75, 20-76, ಮಹಾರಾಷ್ಟ್ರ 17-74, 10-75, 9-76, ಬಿಹಾರ 5-75, 7-76, ಎಲ್ಲಾ ರಾಜ್ಯಗಳೂ ಸೇರಿದಂತೆ 929-74, 468-75, 1019-76, ಭೂವಿವಾದಗಳಿಗೆ ಸಂಬಂಧಿಸಿದಂತೆ ಕೆಲವು ರಾಜ್ಯಗಳಲ್ಲಿ ಲಭ್ಯವಾದ ಅಂಕಿ ಅಂಶಗಳ ಪ್ರಕಾರ ಈ ಅವಧಿಯಲ್ಲಿ ದೌರ್ಜನ್ಯಗಳ ಒಟ್ಟು ಸಂಖ್ಯೆ 491. ರಾಜ್ಯಗಳ ಆಧಾರದಂತೆ : ಒರಿಸ್ಸಾ 5, ಆಂಧ್ರಪ್ರದೇಶ 28, ಮಹಾರಾಷ್ಟ್ರ 12, ರಾಜಸ್ಥಾನ 1, ಗುಜರಾತ್ 7, ಬಿಹಾರ 3, ಮಧ್ಯಪ್ರದೇಶ 121, ಕರ್ನಾಟಕ 10, ತಮಿಳುನಾಡು 1, ಉತ್ತರಪ್ರದೇಶ 275.

ಬಲಾತ್ಕಾರದಿಂದ ಗದ್ದೆ-ಹೊಲಗಳ ಬೆಳೆ ಗಳನ್ನು ನಾಶಪಡಿಸಿದ್ದು : ಉತ್ತರಪ್ರದೇಶ 145, ಮಧ್ಯಪ್ರದೇಶ 19, ಆಂಧ್ರಪ್ರದೇಶ 7, ಕರ್ನಾಟಕ 6, ಮಹಾರಾಷ್ಟ್ರ 5.

ಕೂಲಿ ಕೇಳಿದ್ದಕ್ಕಾಗಿ ನಡೆದ ಘಟನೆಗಳು : ಉತ್ತರ ಪ್ರದೇಶ 43, ಮಧ್ಯಪ್ರದೇಶ 29, ಆಂಧ್ರಪ್ರದೇಶ 11, ಗುಜರಾತ್ 10, ಉತ್ತರ ಪ್ರದೇಶದಲ್ಲಿ ಇಂತಹ ಘಟನೆಗಳು ಪ್ರತಿ ವರ್ಷ ಸುಮಾರು 40ಕ್ಕೂ ಹೆಚ್ಚಾಗಿ ನಡೆಯುತ್ತದೆ ಎಂದು ಹೇಳಲಾಗಿದೆ. ಜೀತಪದ್ಧತಿಗೆ ಸಂಬಂಧಿಸಿದ ಹಾಗೆ ನಡೆದ ದೌರ್ಜನ್ಯಗಳು : ಮಧ್ಯಪ್ರದೇಶ 8, ಉತ್ತರ ಪ್ರದೇಶ 74, ಕರ್ನಾಟಕ 1, ಆಂಧ್ರ ಪ್ರದೇಶ 6, ಋಣಬದ್ಧ ಕಾಯಿದೆ ಜಾರಿ ಸಂಬಂಧ ದಲ್ಲಿ ಮತೀಯ ರೂಪ ಪಡೆದ ದೌರ್ಜನ್ಯಗಳು : ಮಧ್ಯಪ್ರದೇಶ 44, ಉತ್ತರ ಪ್ರದೇಶ 38, ಕರ್ನಾಟಕ 9.

ಹರಿಜನ ಮಹಿಳೆಯರ ಮೇಲೆ ನಡೆದ ಅಪರಾಧಿತ ಕೃತ್ಯಗಳು (1974-77ರವರೆಗೆ) : ಉತ್ತರ ಪ್ರದೇಶ 432, ಮಧ್ಯಪ್ರದೇಶ 413, ಆಂಧ್ರಪ್ರದೇಶ 28, ಬಿಹಾರ್ 7, ಮಹಿಳೆಯರ ಅಪಹರಣ : ಉತ್ತರ ಪ್ರದೇಶ 103, ಮಧ್ಯ ಪ್ರದೇಶ 27.

ಮತೀಯ ದ್ವೇಷ ಅಥವಾ ಬೇಧಬಾವ ಗಳಿಗೆ ಸಂಬಂಧಿಸಿದಂತೆ ನಡೆದ ದೌರ್ಜನ್ಯಗಳು : ಒರಿಸ್ಸಾ 4, ಮಹಾರಾಷ್ಟ್ರ 23, ಕರ್ನಾಟಕ 21, ಆಂಧ್ರಪ್ರದೇಶ 13. ಇತರ ಸಣ್ಣ ಪುಟ್ಟ ಕಾರಣ ಗಳಿಗೆ ಸಂಬಂಧಿಸಿದಂತೆ ನಡೆದ ದೌರ್ಜನ್ಯಗಳು : ಮಹಾರಾಷ್ಟ್ರ 154, ಒರಿಸ್ಸಾ 10, ಗುಜರಾತ್ 111, ಕರ್ನಾಟಕ 85, ಪುದುಚೇರಿ 12.

ಇದೇ ಅವಧಿಯಲ್ಲಿ (1974-1978ರ ಜೂನ್) ಹರಿಜನರ ಮೇಲಿನ ಕೊಲೆ ಸುಲಿಗೆ ಇತ್ಯಾದಿಗಳ ರಾಷ್ಟ್ರ ಮಟ್ಟದ ಅಂಕಿ ಅಂಶ.

ಕೊಲೆಗಳು : 55-74, 95-75, 111-76, 30-77.

ಮನೆಗಳಿಗೆ ಬೆಂಕಿ : 133-74, 221-75, 177-76, 53-77.

ಅಸ್ಪೃಶ್ಯತೆ ಆಚರಣೆ : 916-74, 686-75 1,551-76, 367-77.

ಇತರೆ ಕಾರಣಗಳಿಗೆ ನಡೆದ ದೌರ್ಜನ್ಯಗಳು:

3,763-74, 5,688-75, 5083-76, 1343-77.

ಎಲ್ಲಾ ರೀತಿಯ ದೌರ್ಜನ್ಯಗಳ ಒಟ್ಟು ಸಂಖ್ಯೆ : 4,667-74, 6,690-75, 6,928-76, 1976-77.

ಆರ್ಥಿಕವಾಗಿ ಸಂಬಂಧಿಸಿದಂತೆ ನಡೆದ ಹಿಂಸಾತ್ಮಕ ಕೃತ್ಯಗಳು :

ಭೂವಿವಾದಗಳಿಗೆ ಸಂಬಂಧಿಸಿದಂತೆ :

167-74, 67-75, 226-76, 221-77.

ಬಲಾತ್ಕಾರವಾಗಿ ಬೆಳೆ ನಾಶಪಡಿಸಿದ್ದು ;

53-74, 15-75, 88-76, 29-77.

ಕೂಲಿಗೆ ಸಂಬಂಧಿಸಿದಂತೆ :

50-74, 58-75, 71-76, 29-77.

ಜೀತಪದ್ಧತಿಗೆ ಸಂಬಂಧಿಸಿದಂತೆ :

33-74, 34-75, 125-76, 9-77.

ಋಣಬದ್ಧ ವಿಷಯಗಳಿಗೆ ಸಂಬಂಧಿಸಿ ದಂತೆ :

28-74, 15-75, 54-76, 10-77,

ಇತರೆ ಕಾರಣಗಳಿಗೆ ಸಂಬಂಧಿಸಿದಂತೆ :

598-74, 279-75, 455-76, 132-77

ಸಾಮಾಜಿಕವಾಗಿ ಸಂಬಂಧಿಸಿದಂತೆ ನಡೆದ ಘಟನೆಗಳು :

ಅಂತರ್ಜಾತಿ ಪ್ರೇಮಿಗಳೊಡನೆ ಪಲಾಯ ನಗಳಿಗೆ ಸಂಬಂಧಿಸಿದಂತೆ ;

3-74, 5-75, 2-76, 1-77.

ಯುವತಿ, ಮಹಿಳೆಯರ ಅಪಹರಣ :

46-74, 29-75, 44-76, 7-77.

[6ನೇ ಪುಟ ನೋಡಿ]

---

1957ರ ಚುನಾವಣೆಯಲ್ಲಿ ಚಪ್ರೋಲಿ ಯಲ್ಲಿ ಕೆಲವೇ ನೂರು ಮತಗಳಿಂದ ಚರಣ್ ಸೋಲು ತಪ್ಪಿತು. ಪ್ರತಿಸ್ಪರ್ಧಿಯಲ್ಲೊಬ್ಬ ಹರಿಜನ. ಚುನಾವಣೆಯಾದ ಬಳಿಕ ಹರಿಜನ ಸ್ಪರ್ಧಿಯ ಕೊಲೆಯಾಯಿತು. ಅನೇಕ ಮಂದಿ ಜಾಟ್‌ರು ಈ ಪ್ರಕರಣದಲ್ಲಿ ಆರೋಪಿತರಾಗಿ ದ್ದರು. ಚರಣ್ ಉತ್ತರ ಪ್ರದೇಶದ ಗೃಹಮಂತ್ರಿ ಯಾದ ನಂತರ ಆ ಮೊಕದ್ದಮೆಯನ್ನು ವಾಪಸ್ ಪಡೆದರು.

ಪ್ರಜಾವಾಣಿ 2-5-78

—ಜನತಾ ಮುಂದಿ ಲೇಖನ

(ಚರಣ್ ಕುರಿತು)

---

# ದಾಖಲೆಗಳು

* 30-4-1978 ಸಿಂಗ್‌ಭೂಮ್ ಜಿಲ್ಲೆಯ (ಬಿಹಾರ) ಜೈಡ ಎಂಬಲ್ಲಿ ಗಿರಿಜನರ ಗುಂಪೊಂದರ ಮೇಲೆ ಪೋಲೀಸರು ಗುಂಡು ಹಾರಿಸಿದಾಗ ಕನಿಷ್ಟ ಇಬ್ಬರು ಸತ್ತು ಇತರ ಹಲವರು ಗಾಯಗೊಂಡರು.

* 2-5-78 ಆಗ್ರಾದಲ್ಲಿ ನಡೆದ ದೊಂಬಿಯಲ್ಲಿ ಹರಿಜನರ ಬಸ್ತಿಗಳ ಮೇಲೆ ಪೋಲೀಸರು ಗುಂಡು ಹಾರಿಸಿದ ಕಾರಣ ಕನಿಷ್ಟ ನೂರು ಮಂದಿ ಸತ್ತರೆಂದು ವರದಿಯಾಗಿದೆ.

* 2-5-78 ಆಗ್ರಾದಲ್ಲಿ ನಿನ್ನೆ ಪೋಲೀಸರು ನಡೆಸಿದ ಗೋಲೀಬಾರ್‌ನಿಂದ ಸುಮಾರು 5 ಮಂದಿ ಹರಿಜನರು ಸತ್ತರು. ಗಲಭೆ ತಡೆಯಲು ಪೋಲೀಸರನ್ನು ಕರೆಸಲಾಯಿತು..

* 3-5-78 ಕಲ್ಬುರ್ಗಿ ಜಿಲ್ಲೆಯ ಸಾಲ್ಗಾರ್ ಗ್ರಾಮದಲ್ಲಿ ಬಾವಿಯಿಂದ ನೀರು ತೆಗೆದುಕೊಳ್ಳಲು ಹೋದ ಹರಿಜನರ ಮೇಲೆ ಸವರ್ಣೀಯರು ಹಲ್ಲೆ ನಡೆಸಿ ಅವರ ಗುಡಿಸಲುಗಳಿಗೆ ಬೆಂಕಿ ಹಚ್ಚಿದರಲ್ಲದೆ ಆಹಾರ ಧಾನ್ಯಗಳನ್ನು ದೋಚಿದರು.

* 11-5-78 ಚಿಕ್ಕೋಡಿ ತಾಲ್ಲೂಕು ಮಲಿಕಂದ್ ಗ್ರಾಮದ ದೂದ್‌ಗಂಗಾ ಎಂಬ ನದಿಯಲ್ಲಿ ಸ್ನಾನ ಮಾಡುತ್ತಿದ್ದ ಹರಿಜನ ಬಾಲಕರನ್ನು ಸವರ್ಣೀಯರು ಚೆನ್ನಾಗಿ ಥಳಿಸಿದರು.

* 12-5-78 ಮಧ್ಯಪ್ರದೇಶದ ಚಿದ್‌ವಾರಾ ಜಿಲ್ಲೆಯ ಘಾಟ್‌ಪರಾಸಿಯಾ ಗ್ರಾಮದ ಹರಿಜನನೊಬ್ಬ ತನ್ನ ಗಡ್ಡ ಬೋಳಿಸುವಂತೆ ಕೋರಿ ಕ್ಷೌರಿಕರ ಬಳಿ ಹೋದಾಗ ಅವರು ನಿರಾಕರಿಸಿದರು.

ಇದೇ ಜಿಲ್ಲೆಯ ಘಲಿಟ್‌ವಾಡಾ ಗ್ರಾಮದಲ್ಲಿ ಹರಿಜನ ಮಿತ್ರನೊಬ್ಬನ ಮನೆಯಲ್ಲಿ ಊಟ ಮಾಡಿದ ಕುಂಬಾರನೊಬ್ಬನನ್ನು ಅದೇ ಕುಲದ ಇತರರು ಬಹಿಷ್ಕರಿಸಿದರು.

* 16-5-73 ದಕ್ಷಿಣ ಕನ್ನಡ ಜಿಲ್ಲೆ ಬೆಳ್ಳಾರೆ ಸಮೀಪದ ಪೊನದುಕ್ಕ ಗ್ರಾಮದಲ್ಲಿ ಬಡಹರಿಜನ ಮಹಿಳೆಯೊಬ್ಬಳ 22ವರ್ಷದ ಮಗ ಕೊರಗ ಎನ್ನುವವನನ್ನು ಏ. 13 ರಂದು ಕೊಲೆಮಾಡಲಾಗಿದೆ.

* 27-5-78 ಮದ್ದೂರು ತಾಲ್ಲೂಕಿನ ಬೊಪ್ಪಸಂದ್ರ ಗ್ರಾಮದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಲಿ ಚುನಾವಣೆಯಲ್ಲಿ ತಮ್ಮ ಕಡೆಯವರಿಗೆ ಮತ ಹಾಕಲಿಲ್ಲವೆಂಬ ಕಾರಣಕ್ಕಾಗಿ ಹರಿಜನರ ಮೇಲೆ ಹಲ್ಲೆ ನಡೆಸಲಾಯಿತು.

* 15-6-78 ಸಿರಗುಪ್ಪ ತಾಲ್ಲೂಕು ಶಣವಾಸಪುರ ಗ್ರಾಮದಲ್ಲಿ ರಾತ್ರಿ ಹರಿಜನ ಮದುವೆ ತಂಡದ ಮೆರವಣಿಗೆಯ ಮೇಲೆ ಕಲ್ಲು ತೂರಿದ ಪರಿಣಾಮವಾಗಿ ಐದು ಜನ ಹರಿಜನರು ಗಾಯಗೊಂಡರು.

* 20-6-78 ಮೆಸಾನ್ ಜಿಲ್ಲೆಯ ದುವಾಸನ ಗ್ರಾಮದ ಹರಿಜನ ಭಿಮಾಭಾಯ್ ಹರಿಭಾಯ್ ಮಕವನ ಎಂಬಾತನನ್ನು ಸವರ್ಣೀಯರು ಅಮಾನುಷವಾಗಿ ಹೊಡೆದು ಕೊಂದರು.

ಸೌರಾಷ್ಟ್ರದ ಜಸದನ್ ತಾಲ್ಲೂಕಿನ ಬಡ್ಲ ಗ್ರಾಮದ ಹರಿಜನ ಮಹಿಳೆ ದೇವೂ ಎಂಬಾಕೆಯ ಮೇಲೆ ಹೊಲದಲ್ಲಿ ಅತ್ಯಾಚಾರ ನಡೆಸಲಾಯಿತು. ಮೆಸಾನ ಜಿಲ್ಲೆಯ ಹರಿಜನ ತೆಲಟಿ ಎಂಬಾತನನ್ನು ಸ್ವಗ್ರಾಮದ ಅವನ ಕಚೇರಿಯಲ್ಲೇ ಕೊಲ್ಲಲಾಯಿತು.

* 24-6-78 ಯಾದಗಿರಿ ಬಳಿಯ ಹೊನಗೇರಿ ಗ್ರಾಮದಲ್ಲಿ ಗರ್ಭಿಣಿಯಾಗಿದ್ದ ಹರಿಜನ ಮಹಿಳೆಯೊಬ್ಬಳನ್ನು ಬೆತ್ತಲೆ ಮಾಡಿ ಹೊಡೆದು ಆಕೆಯ ಗಂಡ ಮತ್ತು ಸಂಬಂಧಿಕರನ್ನು ಚೆನ್ನಾಗಿ ಥಳಿಸಲಾಯಿತು.

* 27-6-78 ಮುಂಬಯಿಯ ಆಳಂದಿ ದೇವಾಲಯಕ್ಕೆ ಹರಿಜನರು ಮೆರವಣಿಗೆಯಲ್ಲಿ ಹೋಗುವ ಅವಕಾಶವಿರಲಿಲ್ಲ. ಈ ಸಂಪ್ರದಾಯ ತೊಡಕಿನ ವಿರುದ್ಧ ಹರಿಜನರು ಸತ್ಯಾಗ್ರಹ ನಡೆಸಿದಾಗ ಸಂತ ಜ್ಞಾನೇಶ್ವರರ ಭಕ್ತಾದಿಗಳು ಹರಿಜನರ ಮೇಲೆ ದೌರ್ಜನ್ಯ ಎಸಗಿದರು.

* 28-6-78 ರತ್ನಂ ಜಿಲ್ಲೆಯ ಕಸರಿಹಳ್ಳಿಯಲ್ಲಿ ಜೂನ್ 24 ರಂದು ಮೂವರು ಹರಿಜನರ ಮೇಲೆ ಸವರ್ಣೀಯರು ತೀವ್ರ ಹಲ್ಲೆ ನಡೆಸಿದರು.

* 3-7-78 ಪೋಲೀಸರ ಅಮಾನುಷ ಹೊಡೆತದಿಂದ ಚಿಕ್ಕಮಗಳೂರಿನ ಪೌರ ಕಾರ್ಮಿಕ ರಾಮಯ್ಯ (40) ಎಂಬಾತ ಸಾವಿಗೀಡಾಗಿದ್ದಾನೆ. ಆತ ಫ್ರೆಂಚ್ ಪಾಲಿಷ್ ಕುಡಿದು ಸತ್ತನೆಂದು ಪೋಲೀಸರು ದೂರು ದಾಖಲೆ ಮಾಡಿಕೊಂಡಿದ್ದಾರೆ.

* 4-8-78 ಮುಳುಬಾಗಿಲಿಗೆ ಸಮೀಪದ ಪೊಂಬರ ಹಳ್ಳಿಯಲ್ಲಿ ಚಿಕ್ಕಮುನಿಯಮ್ಮ ಎಂಬಾಕೆಯ ಮನೆಯನ್ನು ಸುಟ್ಟುಹಾಕಲಾಯಿತು.

* 15-9-78 ಶಿಕಾರಿಪುರದ ಸಮೀಪ ಮೂರು ಮೈಲಿ ದೂರದ ನೆಲವಾಗಿಲು ಗ್ರಾಮದ ಗುತ್ಯವ್ವ ತನ್ನ ಸಂಬಂಧಿಗಳ ಜೊತೆ ರಾತ್ರಿ ಸಿನಿಮಾ ನೋಡಿ ಹಳ್ಳಿಗೆ ಹಿಂತಿರುಗುತ್ತಿದ್ದಾಗ 5 ಮಂದಿ ಅವರ ಮೇಲೆ ಬಿದ್ದು ಹಲ್ಲೆ ನಡೆಸಿದರಲ್ಲದೆ ಗುತ್ಯವ್ವನಮೇಲೆ ಅತ್ಯಾಚಾರವೆಸಗಿದರೆಂದು ವರದಿಯಾಗಿದೆ.

* 15-9-78 ಧಾರವಾಡ ಜಿಲ್ಲೆ ಗದಗ ತಾಲ್ಲೂಕಿನ ದುಂಡೂರು ಎಂಬ ಗ್ರಾಮದಲ್ಲಿ ಪೂಜೆಗೆ ಹೋದ ಹರಿಜನ ಯುವಕನ ಮೇಲೆ ಹಲ್ಲೆ ನಡೆಸಲಾಯಿತು.

[6ನೇ ಪುಟ ನೋಡಿ]



## ಗಾಯಕ ಮುನಿಯಲ್ಲಪ್ಪ

ಇಂಜಿನಿಯರಿಂಗ್ ಶಿಕ್ಷಣ ಪಡೆದಿರುವ ಮುನಿಯಲ್ಲಪ್ಪನವರು ಈಗ ಬೆಂಗಳೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ದಲಿತ ಸಂಘಟನೆಯಲ್ಲಿ ತೊಡಗಿದ್ದಾರೆ. ದಲಿತ ಕ್ರಿಯಾ ಸಮಿತಿಯು ನಡೆಸಿದ ಅನೇಕ ಹೋರಾಟಗಳಲ್ಲಿ ಇವರ ಪಾತ್ರ ಮಹತ್ವದ್ದು. ಸವರ್ಣೀಯರ ದಾಳಿಯ ನಿರೀಕ್ಷಣೆಗಳಿದ್ದಾಗಲೂ ದಲಿತರು ನಡೆಸಿದ ಅನೇಕ ಸಭೆಗಳಲ್ಲಿ ಇವರ ಹಾಡೇ ದಲಿತರಿಗೆ ಸ್ಫೂರ್ತಿಯ ಚಿಲುಮೆಯಾಗಿ ಪರಿಣಮಿಸಿದೆ.

ದಲಿತ ಕಲಾವಿದರು ದಲಿತ ಸಂಘಟನೆಗೆ ಕೊಡಬೇಕಾಗಿರುವ ಕಾಣಿಕೆಯ ಮಹತ್ವ ಮುನಿಯಲ್ಲಪ್ಪನವರಿಗೆ ಚೆನ್ನಾಗಿ ಗೊತ್ತಿದೆ. ಆದ್ದರಿಂದಲೇ ದಲಿತರ ಬಿಡುಗಡೆಯ ಚಳುವಳಿಗೆ ತಮ್ಮ ಕಂಠವನ್ನು ಮೀಸಲುಕೊಟ್ಟಿದ್ದಾರೆ. ಚಟುವಟಿಕೆಗಳಿಗೆ ನಿತ್ಯವೂ ಹತ್ತಿರವಾಗುತ್ತಿದ್ದಾರೆ. ಕಲೆಗಾಗಿ ಕಲೆ ಎನ್ನುವ ಮೋಸಗಾರ ತತ್ವವನ್ನು 'ಮುನಿ' ಅವರು ತಿರಸ್ಕರಿಸಿರುವುದಷ್ಟೇ ಅಲ್ಲ, ದಲಿತ ಸಂಘಟನೆಯನ್ನು ಬಲಪಡಿಸುವ ಸಲುವಾಗಿ ಇರುವ ಕ್ರಾಂತಿಕಾರೀ ಸಾಂಸ್ಕೃತಿಕ ತಂಡವೊಂದರ ಜೊತೆಯಲ್ಲಿದ್ದಾರೆ.

ಬೆಂಗಳೂರಿನ ದಲಿತ ಕೇರಿಯೊಂದರಲ್ಲಿ ಸಂಜೆ ಪಾಠದ ಮನೆಯನ್ನು ನಡೆಸುತ್ತಾ ದಲಿತರ ಮಕ್ಕಳ ಶಿಕ್ಷಣದ ಪ್ರಗತಿಗಾಗಿ ದುಡಿಯುತ್ತಿರುವ ಮುನಿಯಲ್ಲಪ್ಪನವರಿಗೆ ಪ್ರಸ್ತುತ ಶಿಕ್ಷಣ ಕಲಿಸುತ್ತಿರುವ ವಂಚನೆಗಳ ಬಗ್ಗೆ ಅರಿವಿದೆ. ಆದ್ದರಿಂದಲೇ ಅವರು ಶಿಕ್ಷಣ ಮತ್ತು ಇಂಥ ಶಿಕ್ಷಣ ಕೊಡುತ್ತಿರುವ ಸಮಾಜದ ಬದಲಾವಣೆ ಆಗಬೇಕೆಂಬ ಹಠವುಳ್ಳವರಾಗಿದ್ದಾರೆ. ಕ್ರಾಂತಿಕಾರೀ ಹಾಡುಗಳನ್ನು ಮುನಿಯಲ್ಲಪ್ಪ ಕಲಿತು ಹಾಡುವುದಿಲ್ಲ. ಅನುಭವಿಸಿ ಹಾಡುತ್ತಾರೆ. ತನ್ಮಯತೆ ಇವರ ಹಾಡುಗಾರಿಕೆಯ ಮುಖ್ಯಗುಣ. ವಿದ್ಯಾರ್ಥಿಗಳ ನಡುವೆ ಮುನಿಯಲ್ಲಪ್ಪ ಒಳ್ಳೆಯ ಹಾಡುಗಳನ್ನು ಕಲಿಸುವ ಒಳ್ಳೆಯ ಉಪಾಧ್ಯಾಯರು.

ಇಂದು ದಲಿತರು ನಿರಾಶೆಯ ಕಗ್ಗಾಡಿನಲ್ಲಿದ್ದಾರೆ. ಭ್ರಮೆಯ ಇಂದ್ರಲೋಕದಲಿದ್ದಾರೆ. 'ಮುನಿ' ಅವರ ಹಾಡುಗಳು ಕಂಗಾಲಾದ ದಲಿತರಿಗೆ ಬೆಳಕಾಗಲಿ. ಮಲಗಿರುವ ಸಮುದಾಯವನ್ನು ಎಚ್ಚರಿಸುವ, ಕಣ್ಣು ತೆರೆಸುವ ಕೆಲಸ ಮಾಡುವ ಕಲಾವಿದರೊಡನೆ 'ಪಂಚಮ' ಎಂದೆಂದೂ ಒಂದಾಗುತ್ತದೆ.

---

## ದಾಖಲೆಗಳು

* 5-10-78 ಬಿಜಾಪುರ ಜಿಲ್ಲೆ ಬಾಗೇವಾಡಿ ತಾಲ್ಲೂಕಿನ ಸಿಂದಗೇರಿ ಗ್ರಾಮದ ಹರಿಜನ ಮಹಿಳೆಯೊಬ್ಬಳು ಮತ್ತು ಆಕೆಯ ಗರ್ಭಿಣಿ ಪುತ್ರಿಯ ಮೇಲೆ ಮೂರು ಮಂದಿ ಅತ್ಯಾಚಾರವೆಸಗಿದ್ದಾರೆ.
* 5-10-78 ಕಲ್ಬುರ್ಗಿ ಜಿಲ್ಲೆ ಮಾರ್ಗೋಳ ಗ್ರಾಮದಲ್ಲಿ ಅ. 1ರಂದು ಸುಮಾರು 12 ಜನರಿದ್ದ ಸವರ್ಣೀಯರ ಗುಂಪು ಸಾಬಣ್ಣ ಮತ್ತು ಇತರೆ ನಾಲ್ಕು ಮಂದಿ ಹರಿಜನರ ಮೇಲೆ ಹಲ್ಲೆ ನಡೆಸಿತು.
* 6-10-78 ಬಿಜಾಪುರ ಜಿಲ್ಲೆ ಬೀಳಗಿ ತಾಲ್ಲೂಕು ತಕ್ಕಲಕಿ ಗ್ರಾಮದಲ್ಲಿ ಸೆ. 18 ರಂದು ಮಾಜಿ ಸೈನಿಕ ಹರಿಜನ ಸಿದ್ದರಾಮಪ್ಪ ಚಲವಾದಿ ಎಂಬಾತನನ್ನು ಸವರ್ಣೀಯರು ಕಂಬಕ್ಕೆ ಕಟ್ಟಿ ಹೊಡೆದು ಕೊಲೆ ಮಾಡಿದರು.
* 8-10-78 ಮಧ್ಯಪ್ರದೇಶದ ಗೋಪಾಲಪುರ ಎಂಬಲ್ಲಿ ಸೆ. 16ರಂದು 22 ವರ್ಷದ ಹರಿಜನ ಮಹಿಳೆಯೊಬ್ಬಳು ಬಾವಿಯಲ್ಲಿ ನೀರು ಸೇದಲು ಹೋದಾಗ ಸವರ್ಣೀಯರು ಆಕೆಯನ್ನು ಬೆತ್ತಲೆಗೊಳಿಸಿ ಥಳಿಸಿದರು.
* 11-10-78 ಬಿಜಾಪುರ ಜಿಲ್ಲೆ ಬಾಗೇವಾಡಿ ತಾಲ್ಲೂಕು ಸಿಂದಗೇರಿ ಗ್ರಾಮದಲ್ಲಿ ಅ. 5ರಂದು ಮೂವರು ಸವರ್ಣೀಯರು ಹರಿಜನ ಮಹಿಳೆ ಮತ್ತು ಆಕೆಯ ಗರ್ಭಿಣಿ ಪುತ್ರಿಯ ಮೇಲೆ ಅತ್ಯಾಚಾರ ಎಸಗಿದರು.
* 18-10-78 ಇಲ್ಲಿಗೆ ಸಮೀಪದ ಜ್ಞಾನಪುರ ರೈಲ್ವೆ ನಿಲ್ದಾಣದಲ್ಲಿ ಪತಿಯೊಂದಿಗೆ ರೈಲಿಗೆ ಕಾಯುತ್ತಿದ್ದ ಹರಿಜನ ಮಹಿಳೆಯೊಬ್ಬಳ ಮೇಲೆ ಸವರ್ಣೀಯ ರೈಲ್ವೆ ರಕ್ಷಕ ದಳದ ನಾಲ್ವರು ನೌಕರರು ಹಲ್ಲೆ ನಡೆಸಿದರು.
* 22-10-78 ಕಲ್ಬುರ್ಗಿ ಜಿಲ್ಲೆ ಚಿತ್ತಾಪುರ ತಾಲ್ಲೂಕು ಹೊಸೂರು ಗ್ರಾಮದಲ್ಲಿ ಭೂವಿವಾದಕ್ಕೆ ಸಂಬಂಧಿಸಿದಂತೆ ಹರಿಜನ ಕೃಷಿ ಕಾರ್ಮಿಕನೊಬ್ಬನನ್ನು ಭೂಮಾಲೀಕರು ಮರಕ್ಕೆ ಕಟ್ಟಿಹಾಕಿ ಪ್ರಜ್ಞೆ ತಪ್ಪುವವರೆಗೆ ಹೊಡೆದರು.

---

[4ನೇ ಪುಟದಿಂದ] **ಕೊಲೆ ಸುಲಿಗೆ ಇತ್ಯಾದಿ**

ಯುವತಿ, ಮಹಿಳೆಯರ ಮೇಲಿನ ಹಠ ಸಂಭೋಗ, ಅತ್ಯಾಚಾರ ಇತ್ಯಾದಿಗಳು :

210-74. 265-75. 329-76. 96-77.

ಮತೀಯ ಭೇದಗಳು: ಹೋಟೆಲು, ಬಾವಿ, ದೇವಾಲಯಗಳಿಗೆ ಮತ್ತಿತರ ಸ್ಥಳಗಳಲ್ಲಿ ಪ್ರವೇಶ ನಿರಾಕರಣೆ ಸಂಬಂಧದಲ್ಲಿ ನಡೆದ ದೌರ್ಜನ್ಯಗಳು :

257-74. 125-75, 255-76. 72-77.

ಚುನಾವಣೆಗಳಲ್ಲಿ ತಮ್ಮ ಪಕ್ಷಗಳಿಗೆ ಮತ ನೀಡಲಿಲ್ಲವೆಂಬ ಕಾರಣಗಳಿಗಾಗಿ ನಡೆದ ದೌರ್ಜನ್ಯಗಳು : 30-74. 3-75. 7-76. 700-77. [ಸೌಜನ್ಯ : ಸ್ಟೇಟ್ಸ್‌ಮನ್]

[3ನೇ ಪುಟದಿಂದ] **...ಬಗ್ಗೆ ಅಸ್ಪೃಶ್ಯತೆ**

ಕರ್ನಾಟಕ ಜನಾಂಗಕ್ಕೆ ಸೇರಿದ ಮುನಿವೆಂಕಟಪ್ಪರಿಗೆ S.S.L.C ಮುಗಿಸಲೇಬೇಕೆಂಬ ಕಾಯ್ದೆ ಇಲ್ಲ. ಇಂಥವರಿಗೆ ತರಬೇತಿ ನೀಡಿ ಬಡ್ತಿನೀಡುವ ಅವಕಾಶವಿದೆ. ಇದನ್ನು ಉಲ್ಲಂಘಿಸಿದ್ದಾರೆ'ಹಾಲ್' ಸಂಸ್ಥೆಯವರು. ಶ್ರದ್ಧೆ, ಸೇವಾಭಾವದಿಂದ ದುಡಿಯುವ ನನ್ನನ್ನು ವೈದ್ಯಕೀಯ ಮೇಲ್ವಿಚಾರಣಾಧಿಕಾರಿಗಳು "ಇಂದಿನಿಂದ ಈ ಮಷಿನ್ ಮುಟ್ಟಬೇಡ"ವೆಂದು ಆದೇಶ ಮಾಡಿ ಅಸ್ಪೃಶ್ಯನನ್ನಾಗಿಸಿದ್ದಾರೆಂದು ಮುನಿವೆಂಕಟಪ್ಪ ದೂರಿಕೊಂಡಿದ್ದಾರೆ.

## ಸಮಸ್ಯೆ ಬಿಡಿಸುವ ‘ಒಂದು ಊರಿನ ಕಥೆ’

ಬರಗೂರು ರಾಮಚಂದ್ರಪ್ಪನವರ ‘ಒಂದು ಊರಿನ ಕಥೆ’ ಇತ್ತೀಚೆಗೆ ಒಂದು ಬಗೆಯ ಗೊಂದಲ ಹಾಗೂ ಕುತೂಹಲ ಹುಟ್ಟಿಸಿದ ಸಿನಿಮಾ. ಬಂಡವಾಳಶಾಹಿ ಹಾಗೂ ಅಧಿಕಾರ ಶಾಹಿ ಶಕ್ತಿಗಳ ಬಗ್ಗೆ, ಒಂದು ನಿಖರ ನೆಲೆ ಒದಗಿಸುವ ಆಮೂಲಕ ದಲಿತರ ನಿಜರೂಪವನ್ನು ಕಣ್ಣೆದುರು ಹಿಡಿಯುವ ಪ್ರಾಮಾಣಿಕ ಅಭಿವ್ಯಕ್ತಿ. ಚಿತ್ರ ತಾಂತ್ರಿಕವಾಗಿ ಹದಗೆಟ್ಟಿದೆ ಅನ್ನುವ ಒಂದು ಕಾರಣ ಒಡ್ಡಿ ಇಡೀ ಚಿತ್ರಕ್ಕೆ ವಂಚನೆಮಾಡಿದ ಕರ್ನಾಟಕದ ಬಂಡವಾಳಶಾಹಿ ಹಾಗೂ ಪ್ರತಿಗಾಮಿ ಶಕ್ತಿಗಳ ತಂತ್ರ ಇಂದು ಹೊಸದೇನಲ್ಲ. ಚಿತ್ರದ ಗೌಡ, ಬಸವಯ್ಯ ಹಾಗೂ ಬ್ರಾಹ್ಮಣನಿಗೂ ಇವರಿಗೂ ಯಾವ ವ್ಯತ್ಯಾಸವೂ ಇಲ್ಲ.

ನಮ್ಮ ಪರಿಸರದ ಇಡೀ ರೂಪವನ್ನು ನಮ್ಮ ಮುಂದಿಟ್ಟು ರಾಜಕೀಯ ತಿಳಿವಳಿಕೆ ಹಾಗೂ ವ್ಯವಸ್ಥೆಯ ಎಲ್ಲ ಮೂಲೆಗಳ ಸತ್ಯವನ್ನು ಸಿನಿಮಾ ನೀಡುತ್ತದೆ. ಜಾತಿಯಲ್ಲೇ ಇರುವ ವರ್ಗ ಅದರೊಟ್ಟಿಗೇ ಹೊಲೆಯರು ನೀರು ಮುಟ್ಟಬಾರದು ಎನ್ನುವ ಹೇಯ ಜಾತಿ ಪದ್ಧತಿ ಎರಡರ ಮೇಲೂ ಚಿತ್ರ ಬೆಳಕು ಚೆಲ್ಲಿದೆ.

ಪುಟ್ಟಿ ಮತ್ತು ಹಟ್ಟಿ ಹನುಮಂತ ನಿಜವಾಗಿ ತುಳಿತಕ್ಕೊಳಪಟ್ಟ ದಲಿತರು. ರಾಮು ಆಗಲಿ ಭೈರಪ್ಪ ಆಗಲಿ ನಮ್ಮ ಹರಿಜನ ರಾಜಕಾರಣಿಗಳಿಗಿಂತ ಹೆಚ್ಚಲ್ಲ. ಚಾವಡಿಯಲ್ಲಿ ಸೀಟು ಗಿಟ್ಟಿಸಲು ಹೋರಾಡುವ ರಾಮು ಮತ್ತು ಭೈರಪ್ಪರು ನಮ್ಮ ಹರಿಜನ ರಾಜಕಾರಣಿಗಳನ್ನು ಪ್ರಾಮಾಣಿಕವಾಗಿ ಪ್ರತಿನಿಧಿಸುತ್ತಾರೆ.

ಚಿತ್ರ ನೀಡುವ ಮತ್ತೊಂದು ಅಂಶ ಅಂದರೆ, ದಲಿತರ ಪ್ರತಿಭಟನಾ ಶಕ್ತಿಯನ್ನು ವ್ಯವಸ್ಥೆ ಹೇಗೆ ಮೊಟಕುಗೊಳಿಸುತ್ತದೆ ಅನ್ನುವುದು. ರಾಮು ಹೋಟೆಲ್‌ನಲ್ಲಿ ಕಾಫಿ ಕೇಳಲು ಹೋದಾಗ ಬಸವಯ್ಯ ಪುಸಲಾಯಿಸಿ ಅವನನ್ನು ಹೊರಕ್ಕೆ ಕರೆತರುತ್ತಾನೆ. ನಾವೆಲ್ಲ ಒಂದೇ ಅನ್ನುತ್ತಾನೆ. ಆದರೆ ಅವನನ್ನು ಸರ್ವರೀತಿಯ ಜಾಣ್ಮೆಯಿಂದ ಮನೆ ಹೊರಗೇ ಕೂರಿಸಿ ಅವನು ಕುಡಿದ ಲೋಟವನ್ನು ಕಡ್ಡಿಯಿಂದ ಹಿಡಿದು ಹೊರಗೆಸೆಯುತ್ತಾನೆ. ಅವನಿಗೆ ಚಾವಡಿಯಲ್ಲಿ ಜಾಗ ಕೊಡುವುದು ಸಹ ಇದಕ್ಕಿಂತ ಹೆಚ್ಚಿನದೇನಲ್ಲ.

ಇಲ್ಲಿ ಗಮನಿಸಬೇಕಾದ್ದು ವ್ಯವಸ್ಥೆ ದಲಿತರಿಗೆ ಹೇಗೆ ವಂಚನೆ ಮಾಡುತ್ತಿದೆ. ಅವರದೇ ರಕ್ತಮಾಂಸವನ್ನು ಹೇಗೆ ಅವರದೇ ಅಲ್ಲ ಎನಿಸಿಬಿಡುತ್ತದೆ ಅನ್ನುವುದು. ನಿಜವಾದ ದಲಿತರಿಗೆ ಇಲ್ಲಿ ಬ್ರಾಹ್ಮಣ, ಬಸವಯ್ಯ, ಗೌಡ, ರಾಮು, ಭೈರಪ್ಪ ಎಲ್ಲಾ ಒಂದೇ. ಹಟ್ಟಿ ಹನುಮಂತನ ಒಡಲ ದುಃಖ ಹತ್ತಿ ಉರಿದಾಗ ಎಲ್ಲರೂ ಸೇರಿ ಹತ್ತಿಕ್ಕುತ್ತಾರೆ. ಇದು ಇಂದಿನ ಸಮಾಜದ ಸತ್ಯ ದರ್ಶನ. ದಲಿತರು ಕಲಿಯಬೇಕಾದ ಪಾಠ.

‘ಒಂದು ಊರಿನ ಕಥೆ’ ಸಮಾಜದ ಎಲ್ಲಾ ಮೂಲೆಗಳಲ್ಲಿ ಇರುವ ವರ್ಗ ವ್ಯವಸ್ಥೆಯನ್ನು ಎತ್ತಿ ಹಿಡಿದ ಏಕೈಕ ರಾಜಕೀಯ ಚಿತ್ರ. ದಲಿತರಿಗೆ ಮಾರ್ಗದರ್ಶಕವಾಗಬಹುದಾದ ಅಥವಾ ಅವರನ್ನು ಯೋಚನೆಗೆ ಹಚ್ಚುವ ಪ್ರಾಮಾಣಿಕ ಪ್ರಯತ್ನ.

—ಇಂದೂ

ಬೆಂಗಳೂರಿನ ‘ಸಮುದಾಯ’ ನಾಟಕತಂಡ ತನ್ನ ಕ್ರಾಂತಿಕಾರೀ ಧೋರಣೆಯಿಂದ ಎಡ ಸಾಂಸ್ಕೃತಿಕ ಚಳುವಳಿಯಾಗಿ ಜನಪ್ರಿಯವಾಗಿದೆ. ಮಧ್ಯಮ ವರ್ಗದವರ ಮಧ್ಯೆ ಇದ್ದ ‘ಸಮುದಾಯ’ ಮೊನ್ನೆ ಒಂದು ಹೊಸ ತಿರುವನ್ನು ಪಡೆಯಿತು. ತನ್ನ ರಂಗ ಚಟುವಟಿಕೆಗಳಿಗೆ ಮಧ್ಯಮ ವರ್ಗವನ್ನು ಅಷ್ಟೇ ಅಲ್ಲ ಅದು ದಲಿತರನ್ನೂ ಒಳಗೊಳ್ಳುವ ಪ್ರಾಮಾಣಿಕ ಪ್ರಯತ್ನವನ್ನು ನಡೆಸಿತು. ಸಮುದಾಯ ಕಲಾಕ್ಷೇತ್ರದಿಂದ ಬೆಂಗಳೂರಿನ ಕೊಳಗೇರಿಯ ಕಡೆಗೆ ಪ್ರಯಾಣವನ್ನು ಆರಂಭಿಸಿತು.

‘ಬೆಲ್ಚಿ’ ಮತ್ತು ‘ದಲಿತರು ಬರುವರು’ ಈ ಎರಡು ನಾಟಕಗಳು ಹತ್ತಾರು ದಲಿತರ ಕೇರಿಗಳಲ್ಲಿ ಯಶಸ್ವಿಯಾಗಿ ಪ್ರದರ್ಶನಗೊಂಡವು. ಬಿಹಾರ ರಾಜ್ಯದ ‘ಬೆಲ್ಚಿ’ಯಲ್ಲಿ 11ಜನ ದಲಿತರ

## ದಲಿತರ ಹತ್ತಿರಕ್ಕೆ ‘ಸಮುದಾಯ’

ಸಜೀವದಹನ ಬೆಲ್ಚಿ ನಾಟಕ ವಸ್ತು. ಈ ನಾಟಕವನ್ನು ದುಡಿಯುವ ವರ್ಗದ ಜನ ಕಣ್ಣಗಲಿಸಿ, ಕಿವಿಯಗಲಿಸಿ ನೋಡಿದರು, ಕೇಳಿದರು. ತಮ್ಮ ರಕ್ತ ಸಂಬಂಧಿಗಳು ಸುಟ್ಟುಹೋದ ಗೋಳಿನ ಕಥೆಯ ನಾಟಕನೋಡಿ ಕಂಬನಿದುಂಬಿದರು. 18 ಗಂಟೆ ದುಡಿಮೆಯ ವಿರುದ್ಧ ಹೋರಾಟ ಮಾಡಿ 8ಗಂಟೆ ದುಡಿಮೆ ಮಾಡುವ ಹಕ್ಕನ್ನು ಗಳಿಸಿದ ಕಥೆ ‘ದಲಿತರು ಬರುವರು’ ನಾಟಕದ ವಸ್ತು. ಈ ಹೋರಾಟದ ಕಥೆಯಿಂದ ದಲಿತರು ಉತ್ಸಾಹಗೊಂಡರು. ಸಂಘಟನೆ ಹೋರಾಟಗಳೇ ತಮ್ಮ ಬಿಡುಗಡೆಯ ದಾರಿಯೆಂದು ದಲಿತರಿಗೆ ಮನದಟ್ಟಾಗಲು ಈ ನಾಟಕಗಳು ನೆರವಾದವು. ಈ ನಾಟಕಗಳನ್ನು ಕೃಷ್ಣಸ್ವಾಮಿ ಸಮರ್ಥವಾಗಿ ನಿರ್ದೇಶಿಸಿದ್ದರು. ಈ ಒಳ್ಳೆಯ ಕಾರ್ಯಕ್ಕಾಗಿ ಸಮುದಾಯವನ್ನು ಅಭಿನಂದಿಸುತ್ತೇವೆ.

## ಚಿಕ್ಕಮಗಳೂರು ಲೋಕಸಭಾ ಉಪ ಚುನಾವಣೆಗೆ ದ.ಸ.ಸ ಬಹಿಷ್ಕಾರ

ಭಾರತಕ್ಕೆ ಸ್ವಾತಂತ್ರ್ಯ ಬಂದಿದೆ ಎಂದು ಹೇಳಲಾಗುತ್ತಿದ್ದರೂ ಈ ದೇಶದ ದಲಿತರ ಕಾರ್ಮಿಕರ ದುಡಿಯುವವರ ಪಾಲಿಗೆ ಇನ್ನೂ ಸ್ವಾತಂತ್ರ್ಯ ಬಂದಿಲ್ಲ. ಅವರ ಮೇಲೆ ದಿನವೂ ಕೊಲೆ, ಸುಲಿಗೆ. ಅತ್ಯಾಚಾರ ನಡೆದಿದೆ. ಈ [illegible] ರಾಜಕೀಯ ಪಕ್ಷಗಳು ಗಮನ ಕೊಡದೆ ಬಡಜನ ಆಸೆ ಭರವಸೆ ಘೋಷಣೆ ಕೊಟ್ಟು ವಂಚಿಸಿ ಅಧಿಕಾರದ ಗದ್ದುಗೆ ಏರುತ್ತಿವೆ. ಅಧಿಕಾರಕ್ಕಾಗಿ ಹೆಂಡ, ಜಾತಿ. ಹಣ ಚೆಲ್ಲಿ ಚುನಾವಣಾ ವ್ಯವಸ್ಥೆಯನ್ನು ಭ್ರಷ್ಟಗೊಳಿಸಿವೆ. ಇಂಥ ವ್ಯವಸ್ಥೆಯನ್ನು ಖಂಡಿಸಿ ಕರ್ನಾಟಕದ ದಲಿತ ಸಂಘರ್ಷ ಸಮಿತಿ ಚಿಕ್ಕಮಗಳೂರಿನ ಲೋಕಸಭಾ ಉಪ ಚುನಾವಣೆಯನ್ನು ಬಹಿಷ್ಕರಿಸಿತು. ಮತ್ತು ಕಾಂಗ್ರೆಸ್–ಜನತಾ ರಾಜಕೀಯದಿಂದ ಆಗುತ್ತಿರುವ ಅನ್ಯಾಯಗಳನ್ನು ಪ್ರಶ್ನಿಸುವ ಕರಪತ್ರವೊಂದನ್ನು ಹೊರಡಿಸಿ ಚಿಕ್ಕಮಗಳೂರು ಜಿಲ್ಲಾ ಕಚೇರಿ ಮುಂದೆ ಸಮಿತಿಯ ಕಾರ್ಯಕರ್ತರು ಧರಣಿ ನಡೆಸಿದರು.

ಕರಪತ್ರದ ವಿವರ :

ಚುನಾವಣಾ ಪ್ರಣಾಳಿಕೆಯಲ್ಲಿ ಉದ್ಯೋಗವನ್ನು ಮೂಲಭೂತ ಹಕ್ಕನ್ನಾಗಿ ಮಾಡುತ್ತೇವೆಂದು ಬೊಗಳೆ ಹೊಡೆದ ಜನತಾಪಕ್ಷದವರೇ ನಿಮ್ಮ ಆಶ್ವಾಸನೆ ನಿಮಗೆ ಗೊತ್ತೇನು? ಅದು ಏನಾಯ್ತು? ಸಂಘಟಿತ ಕಾರ್ಮಿಕರ ಹಕ್ಕನ್ನು ಬಗ್ಗು ಬಡಿದ ಇಂದಿರಾಗಾಂಧಿಯವರೇ ದಲಿತರೂ ಸಂಘಟಿತರಾಗಿದ್ದರೆ ಬಗ್ಗು ಬಡಿಯುತ್ತಿದ್ದಿರಿ ತಾನೆ? ನಿಜಹೇಳಿ. ನಿಮ್ಮೆಲ್ಲರ ‘‘ಬಡವರ ಉದ್ಧಾರದ ಮಾತು’ ವಂಚನೆಯಲ್ಲವೆ? ನೀವಿಬ್ಬರೂ ಜನತಾ ಮತ್ತು ಕಾಂಗ್ರೆಸ್ಸಿಗರು ದಲಿತರ ಶೋಷಣೆಗೆ ಕಾರಣರಾಗಿದ್ದೀರಿ. ದಲಿತರ, ಬಡವರ ಹೆಸರಿನಲ್ಲಿ ಗದ್ದುಗೆ ಏರಿದ್ದೀರಿ. ಸ್ವಾರ್ಥ ಸಾಧಿಸಿದ್ದೀರಿ. ಯಾವ ಧೂರ್ತರಾದ ನಿಮಗೆ ಮತನೀಡಿ ನಮ್ಮ ಮಕ್ಕಳ ಭವಿಷ್ಯವನ್ನು ಹಾಳು ಮಾಡಲು ನಾವು ಬಿಡಲಾರೆವು. ಇಂದು ನಾವೂ ಕಣ್ಣು ಬಿಟ್ಟಿದ್ದೇವೆ, ಎಚ್ಚರಿಕೆ.

# ಕಂಡದ್ದು ಕಂಡಂಗೆ

## ಹೆಳವನೂ ಹಾಗೂ ಸರ್ಕಾರ ಕೊಟ್ಟ ಜಮೀನೂ

ಹೆಳವ ಕನಸಿನಲ್ಲೂ ಕಂಡಿರಲಿಲ್ಲ ತನಗೆ ಸರ್ಕಾರ ನಾಕೆಕರೆ ಜಮೀನು ಕೊಡುತ್ತದೆ ಅಂತ. ಶಾನುಬೋಗರು ಬಂದು 'ನಿನಗೆ ಚನಕಲ್ಲಿನಲ್ಲಿ ನಾಕೆಕರೆ ಗ್ರಾಂಟು ಬಂದಿದೆ ಕಣೋ ಅಂದಾಗ ಅವನಿಗೆ ಖುಷಿಯೋ ಖುಷಿ.

ಜಮೀನು ನೋಡಿಕೊಂಡು ಬಂದ. ಸಕತ್ತು ಕಾಡು ಬೆಳೆದಿತ್ತಾದರೂ ನೆಲ ಬಂಗಾರದಂಗಿತ್ತು. ಸರ್ಕಾರದೋರು ನವ್ಗೆ ಏಟೊಂದು ಸಹಾಯ ಮಾಡ್ತ ಅವ್ರೆ ಅಂದುಕೊಂಡ.

ಕಾಡು ಕಡಿಸಕ್ಕೆ ಹೆಳವ ಪ್ಲಾನು ಹಾಕತೊಡಗಿದ. ದಿನಾ ಕೂಲಿ ಮಾಡೋ ನಂತಾವ ಕಾಸಿಲ್ಲ. ನಾನೇ ಕಡಿಯುಕ್ಕೋದ್ರೆ ಹೊಟ್ಟೆಗೆ ತಣ್ಣೀರ ಬಟ್ಟೆ ಅಂತ ಯೋಚಿಸಿದವನೆ ನೆಟ್ಟಗೆ ಗೌಡರ ಹತ್ತಿರ ಹೋಗಿ ಇದ್ದ ವಿಷಯ ತಿಳಿಸಿದ. ಗೌಡರು ಅಲ್ಲೇ ಇದ್ದ ಮೇಷ್ಟರಿಂದ ಪತ್ರವೊಂದ ಬರೆಸಿ ಹೆಳವನ ಹೆಬ್ಬೆಟ್ಟು ಒತ್ತಿಸಿಕೊಂಡವರು ಹತ್ತರ ಹತ್ತು ಮಿರಿ ಮಿರಿ ನೋಟುಗಳನ್ನ ಕೊಟ್ಟು ಕಳಿಸಿದರು. ಹೆಳವನಿಗೆ ಗೌಡರು ದೇವರಂಗೆ ಕಂಡು ಅವರಿಗೆ ಕೈಮುಗಿದು ಅಡ್ಡ ಬಿದ್ದು ಹೊರಟನು.

ಮಾರನೆ ದಿನದಿಂದಲೇ ಹೆಳವ ಕೂಲಿಗೆ ಹೋಗುವದ ಬಿಟ್ಟು ಕಾಡನ್ನು ಒಕ್ಕಡೆಯಿಂದ ಸವರ ತೊಡಗಿದ. ತಿಂಗಳೊಳಗಾಗಿ ಗೌಡರ ಕಾಸು ಕರಗಿ ಮತ್ತೆ ಹೆಬ್ಬೆಟೊತ್ತಿ ಬಂದ.

ನಾಲ್ಕೈದು ತಿಂಗಳಲ್ಲಿ ಕಾಡು ಕಡಿದು ಭೂಮಿ ಸಮ ಮಾಡಿದ. ಉಳಲು ಗೌಡರೇ ಎತ್ತು ಕೊಟ್ಟರು. ಗೌಡರ ಸಹಕಾರದಿಂದ ಗಂಡ ಹೆಂಡತಿ ಹಗಲು ರಾತ್ರಿ ಎನ್ನದೆ ದುಡಿದು ಬೆಳೆ ತೆಗೆದರು. ರಾಗಿ ಹಣ್ಣಾಗಿ ನೋಡಿದವರ ಕಣ್ಣು ಕುಕ್ಕುವಂಗಿತ್ತು. ಇನ್ನು ಕೇವಲ ಒಂದು ವಾರದಲ್ಲಿ ಕುಯ್ಯಬೇಕು. ಇದ್ದಕ್ಕಿದ್ದಂತೆ ಗೌಡರು ಹೆಳವನ ಕರೆಸಿದರು. "ನೀನು ಸಾಲ ತಕೊಂಡು ಆಗಲೇ ವರ್ಷ ಮೀರಿದ್ದು, ಬಡ್ಡಿ ಎಲ್ಲಾ ಸೇರಿ ಐದು ಸಾವಿರ ಆಗದೆ. ಇನ್ನೊಂದು ವಾರದಲ್ಲಿ ಕೊಟ್ಬುಡು" ಅಂದರು. ಹೆಳವ ಭೂಮಿಗಿಳಿದು ಹೋದ. ಮತ್ತಗೆ ಮನೆಗೆ ಬಂದು ಹೆಂಡಿರ ಮುಂದೆ ಕುಂತು ಅತ್ತ. ತಾನು ಬೆಳೆದಿರುವ ಬೆಳೆಯನ್ನೆಲ್ಲ ಮಾರಿದರೂ ಐದು ಸಾವಿರ ಆಗಕ್ಕಿಲ್ಲ ಅಂದು ಗೋಳಾಡಿದ.

ಊರ ಮುಖಂಡರಲ್ಲಿ ನ್ಯಾಯ ಕೇಳಿದಾಗ, ಈ ಬಾರಿಯ ಬೆಳೆಯೂ ಸೇರಿದಂತೆ ಜಮೀನನ್ನು ಗೌಡರಿಗೆ ಕ್ರಯ ಮಾಡಿಕೊಡುವಂತೆಯೂ, ಆದೇ ಜಮೀನನ್ನು ಈತನೇ ಗುತ್ತಿಗೆ ಮಾಡುವಂತೆಯೂ ತೀರ್ಮಾನವಾಯ್ತು.

ಸರ್ಕಾರ ಕೊಟ್ಟ ಜಮೀನು ಹಿಂಗೆ ತನ್ನ ಕೈ ತಪ್ಪಿ ಹೋಗುವುದೆಂದು ಅವನು ಎಣಿಸಿರಲಿಲ್ಲ. ದೇವ್ರು ಕೊಟ್ಟಿದ್ದ, ಅವ್ನೇ ಕಿತ್ಕೊಂಡ ಅಂದುಕೊಂಡ. ಗೌಡನ ಮರ್ಮ ಅವ್ನಿಗೆ ಕಡೆಗೂ ತಿಳಿಯಲಿಲ್ಲ.

## ....ದಲಿತರೊಳಗೇ ಘರ್ಷಣೆ

[ಮೊದಲನೇ ಪುಟದಿಂದ]

ಗಳಿಗೆ ಬಹಿಷ್ಕಾರ ಹಾಕಲಾಯಿತು. ಈ ವಿಚಾರ ತಿಳಿದು ದಲಿತ ಸಂಘರ್ಷ ಸಮಿತಿಯ ಕೋಲಾರ ಶಾಖೆ ಸ್ಥಳಕ್ಕೆ ಹೋಗಿ ಅಲ್ಲಿನ ಸ್ಥಿತಿಯನ್ನು S.P., D C. ಮತ್ತು ಇತರ ಅಧಿಕಾರಿಗಳಿಗೆ ವಿವರಿಸಿ ಕ್ರಮ ಕೈಗೊಳ್ಳುವಂತೆ ಮನವಿ ಸಲ್ಲಿಸಿತು. ಆದರೆ ಅಧಿಕಾರಿಗಳು ಯಾವುದೇ ಕ್ರಮ ಕೈಗೊಳ್ಳದೆ ನಿರ್ಲಕ್ಷ್ಯದಿಂದಿದ್ದರು.

ಭೂಮಾಲೀಕರು ತಮ್ಮ ಮನೆಯಲ್ಲಿ ಕೂಲಿ ಮಾಡುವ ಅವಿದ್ಯಾವಂತ ಅಸಹಾಯಕ ದಲಿತರನ್ನು ತಮ್ಮ ಹದ್ದುಬಸ್ತಿನಲ್ಲಿಟ್ಟುಕೊಂಡು ವಿದ್ಯಾವಂತ ದಲಿತರಿಗೆ ಕಿರುಕುಳ ಕೊಡುವುದನ್ನು ನಡೆಸೇ ಇದ್ದರು. ಇದು ತೀವ್ರ ಸ್ವರೂಪ ತಾಳಿಕೊಂಡಿದ್ದಲ್ಲದೆ ತಾ॥ 19-11-78ರ ಮಧ್ಯರಾತ್ರಿಯಲ್ಲಿ ಅವಿದ್ಯಾವಂತ ದಲಿತರನ್ನು ಮುಂದು ಮಾಡಿಕೊಂಡು ವಿದ್ಯಾವಂತ ದಲಿತರ ಮೇಲೆ ಹಲ್ಲೆ ನಡೆಸಿದಾಗ ಎರಡೂ ಗುಂಪಿಗೆ ಘರ್ಷಣೆಯಾಗಿ ಒಬ್ಬನು ಸತ್ತಿರುವನಲ್ಲದೆ ಮತ್ತೊಬ್ಬನ ಸ್ಥಿತಿ ಸಾವಿನ ಅಂಚಿನಲ್ಲಿದೆ. ಹತ್ತು ಜನರಿಗೆ ತೀವ್ರ ಗಾಯಗಳಾಗಿ ಆಸ್ಪತ್ರೆಯಲ್ಲಿದ್ದಾರೆ.

## ದಲಿತೋದ್ಧಾರದ ಮುಸುಕಿನಲ್ಲಿ ನಡೆಯುವ ಅವ್ಯವಹಾರ

[ಮೊದಲನೇ ಪುಟದಿಂದ]

ಹುಲಿಗೆಮ್ಮನವರು ವಿದ್ಯಾರ್ಥಿಗಳು ಹಸಿದಿರುವುದನ್ನು ನೋಡಿ "ನೀವು ಉಪಾಸ ಇರದು ನನ್ನ ಕಣ್ಣಿಂದ ನೋಡಾಕಾಗದಿಲ್ರಪಾ. ಹಿಡ್ರಿ ನನ್ನ ಹತ್ರ ಇಪ್ಪತ್ತು ರೂಪಾಯಿ ಆದಾವು ಏನರ ತಿಂದ ಬರ್ರಿ" ಅಂತ 20ರೂ. ಕೊಟ್ಟರು. ಈ ಘಟನೆ ಹೋರಾಟಕ್ಕೆ ಸ್ಫೂರ್ತಿ ಕೊಟ್ಟಿತು. ಈ ಹೋರಾಟಕ್ಕೆ ಬೆಂಬಲಿಸಿ ತುಮಕೂರು ಕೋಲಾರ ದ.ಸ.ಸ. ಜಿಲ್ಲಾ ಶಾಖೆಗಳು ಪ್ರತಿಭಟನೆ, ಧರಣಿ ಮಾಡಿದವು.

ಟ್ರಸ್ಟ್ ಅಕ್ರಮ ವ್ಯವಹಾರಗಳಲ್ಲಿ ತೊಡಗಿ ಸರಕಾರದ ಹಣ ದುರುಪಯೋಗ ಮಾಡುತ್ತಿರುವುದರಿಂದ ಟ್ರಸ್ಟನ್ನು ವಜಾ ಮಾಡಿ ಸರ್ಕಾರವೇ ಹಾಸ್ಟೆಲನ್ನು ವಹಿಸಿಕೊಳ್ಳಬೇಕೆಂದು ಒತ್ತಾಯಿಸಿ ಅ. 24ರಿಂದ ಆಜಾದ್ ಪಾರ್ಕ್ ಎದುರು ಪ್ರತಿನಿತ್ಯ 10ಜನ 24 ಗಂಟೆಗಳ ಸರದಿ ಉಪವಾಸ ಪ್ರಾರಂಭಿಸಿದರು.

ಅವ್ಯವಹಾರಕ್ಕೆ ಬಸವಲಿಂಗಪ್ಪನವರು, ಅವರ ಅಳಿಯಂದಿರಾದ ಸಿ. ಕೆ. ಛಂಬಳೆ, ಹಾಸ್ಟೆಲ್ ವಾರ್ಡನ್ ಕೆಲಗೇರಿ, ಕ್ಲಾರ್ಕ್ ಛಲವಾದಿ, ಸ್ಟೋರ್ ಕೀಪರ್ ದೊಡ್ಡಮನಿ ಇವರುಗಳು ಕಾರಣರಾಗಿದ್ದಾರೆ. ಸರ್ಕಾರಕ್ಕೆ ಇದೆಲ್ಲ ತಿಳಿಸಿದರೂ ಯಾವುದೇ ಕ್ರಮ ತೆಗೆದುಕೊಳ್ಳದಿದ್ದು, ರಾಜ್ಯದ ದ.ಸ.ಸ. ಕಾರ್ಯಕರ್ತರು 13-11-78 ರಂದು ಬೆಂಗಳೂರಿನಲ್ಲಿ ಒಟ್ಟುಗೂಡಿ ಸಮಾಜ ಕಲ್ಯಾಣ ಮಂತ್ರಿ ಹಾವನ್ನೂರರನ್ನು ಕಂಡು ಹಾಸ್ಟೆಲ್ ಅವ್ಯವಸ್ಥೆ ಬಗ್ಗೆ ತಿಳಿಸಿದರು. ಅವರ ಆದೇಶದ ಮೇರೆಗೆ ದ.ಸ.ಸ. ಹಾಸ್ಟೆಲನ್ನು ನಡೆಸಲು ಒಪ್ಪಿದೆ.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3. ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.
ವಿಳಾಸ: 5-ಎ, ವಾಣಿ ವಾಣಿಜ್ಯ ಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560 002